

# ಶ್ರೀಮನ್ಮಧ್ವಾಚಾರ್ಯರ ಚರಿತ್ರೆ

ಮತ್ತು

## ಶ್ರೀಮಜ್ಜಯತೀರ್ಥರ ಚರಿತ್ರೆ

ಧರ್ಮವಿಜ್ಞಾನ ವೈರಾಗ್ಯ ಪರಮೈಶ್ವರ್ಯ ಶಾಲಿನಃ ।
ಆನಂದತೀರ್ಥ ಭಗವತ್ಪಾದಾನ್ ವಂದೇ ನಿರಂತರಂ ॥

[ಶ್ರೀಮಜ್ಜಯತೀರ್ಥ ಭಿಕ್ಷುಃ]

ಸತ್ಯಾಭಿಕೃಷ್ಣಂ ತಥಾ ಮಧ್ವಂ ಜಯತೀರ್ಥ ಗುರೂನಪಿ।
ವಕ್ಷ್ಯೇ ಶ್ರೀಮಜ್ಜಯಾರ್ಯಾಣಾಂ ಸ್ತೋತ್ರಂ ಸರ್ವಸಮೃದ್ಧಿದಂ ॥

(ಶ್ರೀಮಜ್ಜಯತೀರ್ಥ ಪೂಜ್ಯಚರಣಶಿಷ್ಯ ವ್ಯಾಸತೀರ್ಥಃ)


ಲೇಖಕರು

ಕರ್ನಾಟಕ ಇತಿಹಾಸ ಸಂಶೋಧಕರಾದ

**ನಾರಾಯಣಾಚಾರ್ಯ ಶ್ರೀನಿವಾಸಾಚಾರ್ಯ**

**ರಾಜಪುರೋಹಿತ**

ದಾನಧರ್ಮ ಪದ್ಧತಿ, महाराष्ट्र व कर्नाटक,
ಶ್ರೀಸುರೇಶ್ವರಾಚಾರ್ಯರ ಚರಿತ್ರೆ, ಕರ್ನಾಟಕದ ಇತಿಹಾಸ
ಇತ್ಯಾದಿ ಪುಸ್ತಕಗಳ ಕರ್ತೃ.



ಧಾತೃ ೧೮೫೮ ಯುಗಾದಿ

ಅವಧೂತ ಗ್ರಂಥಾಲಯದ ಪ್ರಕಟನೆ ೬

ಶ್ರೀಶಿವಾನಂದ ಮಂದಿರ,

ಶಂಕರಪುರ ಹುಬ್ಬಳ್ಳಿ

ಚಾಳುಕ್ಯ ವಿಕ್ರಮವರ್ಷ ೮೬೧ — ಕ್ರಿಸ್ತವರ್ಷ ೧೯೩೬

**ಬೆಲೆ ೧ ರೂ. ೪ ಆಣೆ.**

# ಮುನ್ನುಡಿ



ಪರಮ ಪುಣ್ಯಶ್ಲೋಕರಾದ ಶ್ರೀಮದಾನಂದತೀರ್ಥರ ಮತ್ತು ಶ್ರೀಮಜ್ಜಯತೀರ್ಥರ ಅತ್ಯುದಾತ್ತವಾದ ಚರಿತ್ರಗಳನ್ನು ನಿರೂಪಣಮಾಡಿದ್ದರಿಂದ ನನ್ನ ವಾಣಿಯು ಪವಿತ್ರವಾಯಿತು; ನಾನು ಧನ್ಯನಾದೆನು. ಈ ಮಹಾಭಾಗರ ಚರಿತ್ರಗಳನ್ನು ಚಿಕಿತ್ಸಕ ದೃಷ್ಟಿಯಿಂದ ಅಭ್ಯಾಸಮಾಡಲು ಪಕ್ರಮಿಸಿ, ಇಂದಿಗೆ ೨೫ ವರ್ಷಗಳಾಗಿ ಹೋದವು! ಇಂಥ ದೀರ್ಘಕಾಲೀನ ಅಭ್ಯಾಸವು, ಇಂದು ಶ್ರೀಹರಿ, ಗುರುಗಳ ಕೃಪೆಯಿಂದ ಈ ಗ್ರಂಥ ರೂಪದಿಂದ ಪೂರ್ಣವಾದದ್ದನ್ನು ನೋಡಿ, ನನ್ನ ಮನಸ್ಸಿಗೆ ಅತಿಶಯ ಆನಂದವಾಗಿದೆ.

ಮೊಟ್ಟ ಮೊದಲು ಶ್ರೀಮಜ್ಜಯತೀರ್ಥರ ಚರಿತ್ರವನ್ನು ಚಿಕಿತ್ಸಕ ದೃಷ್ಟಿಯಿಂದ ಅಭ್ಯಾಸಮಾಡಲಾರಂಭಿಸಿ, ೧೯೦೯ನೆಯ ಇಸವಿಯಲ್ಲಿ ಮಳಖೇಡ, ಸುರಪುರಗಳ ಕಡೆಗೆ ಹೋಗಿ, ಅಲ್ಲಿಯ ಪರಿಸ್ಥಿತಿಯನ್ನು ಐತಿಹಾಸಿಕ ದೃಷ್ಟಿಯಿಂದ ನಿರೀಕ್ಷಿಸಿ, ಹಾಗೂ ಅಲ್ಲಿಯ ಪಂಡಿತರ ಸಂಗಡ ವಿಚಾರ ವಿನಿಮಯವನ್ನು ಮಾಡಿ, ಪುನಃ ಧಾರವಾಡಕ್ಕೆ ತಿರುಗಿ ಬಂದೆನು. ಮುಂದೆ ೧೮ ವರ್ಷಗಳಾದ ಬಳಿಕ ಶ್ರೀಮಜ್ಜಯತೀರ್ಥರ ಜನ್ಮಸ್ಥಳವನ್ನು ಕಂಡು ಹಿಡಿಯುವದಕ್ಕೋಸ್ಕರ ೧೯೨೭ನೆಯ ಇಸವಿಯಲ್ಲಿ ಮಂಗಳವೇಢೆ ಗ್ರಾಮಕ್ಕೂ, ೧೯೨೮ನೆಯ ಇಸವಿಯಲ್ಲಿ ಪುನಃ ಮಳಖೇಡ, ಯರಗೋಳ, ಸನ್ನತಿಯ ಶ್ರೀಚಂದಲಾಪರಮೇಶ್ವರೀ ದೇವಿಯ ಕ್ಷೇತ್ರ, ಹಾಗೂ ಹುರಸಗುಂಡಗಿ ಗ್ರಾಮಗಳಿಗೂ ಹೋಗಿ, ಆಯಾ ಸ್ಥಳದ ಪರಿಸ್ಥಿತಿಯನ್ನು ಐತಿಹಾಸಿಕ ದೃಷ್ಟಿಯಿಂದಲೂ ತುಲನಾತ್ಮಕ ದೃಷ್ಟಿಯಿಂದಲೂ ನೋಡಿಕೊಂಡು, ಅಲ್ಲಲ್ಲಿಯ ವೃತ್ತಾಂತಗಳನ್ನು ತಿಳಿದುಕೊಂಡು ಬಂದೆನು, ಆ ಕಾಲದಲ್ಲಿ ಮಂಗಳವೇಢೆ ತಾಲೂಕಿನ ಮಾಮಲೇದಾರರಾದ ಶ್ರೀಮಾನ್ ಲಾಗೂ ಇವರೂ ಹಾಗೂ ಕಲಬುರ್ಗಿಯ ಶ್ರೀಮಾನ್ ಕೃಷ್ಣರಾವ ಕಪಟರಾಳ

ವಕೀಲರೂ ನನ್ನ ಈ ಸಂಶೋಧನಕಾರ್ಯಕ್ಕೆ ಸೌಕರ್ಯಗಳನ್ನು ಏರ್ಪಡಿಸಿಕೊಟ್ಟರು, ಇದಕ್ಕೋಸ್ಕರ ಈ ಮಹಾಶಯರಿಬ್ಬರಿಗೆ ನಾನು ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ.

ಇದೇ ಮೇರೆಗೆ ಶ್ರೀಮನ್ಮಧ್ವಾಚಾರ್ಯರ ಚರಿತ್ರವನ್ನು ಐತಿಹಾಸಿಕ ದೃಷ್ಟಿಯಿಂದ ಅಭ್ಯಾಸಮಾಡಲು ೧೯೩೨ನೆಯ ಇಸವಿಯ ನವಂಬರ ೧೪ ನೆಯ ತಾರೀಖಿನ ದಿವಸ ಉಡುಪಿಗೆ ತೆರಳಿದೆನು. ಉಡುಪಿಯಲ್ಲಿರುವ ('ಕಡೇಕಾರ'ಎಂಬಲ್ಲಿರುವ) ಶ್ರೀಮಾನ್ ಎಸ್. ರಾಜಗೋಪಾಲಕೃಷ್ಣರಾಯರು ಕರ್ನಾಟಕ ಸಾಹಿತ್ಯಸಮ್ಮೇಳನದ ನಿಮಿತ್ತದಿಂದ ನನಗೆ ಚಿರ ಪರಿಚಿತರೂ ಸ್ನೇಹಿತರೂ ಆಗಿದ್ದುದಲ್ಲದೆ. ಇವರು ಅತಿಶಯ ಉದಾರಚರಿತರಾದುದರಿಂದ ನನ್ನ ಸಂಶೋಧನಕಾರ್ಯಕ್ಕೆ ಒಂದು ತಿಂಗಳ ವರೆಗೂ ಎಲ್ಲ ಸೌಕರ್ಯಗಳನ್ನು ಏರ್ಪಡಿಸಿಕೊಟ್ಟರು. ಇವರ ಸಾಹಾಯ್ಯದಿಂದಲೇ ಶ್ರೀಮನ್ಮಧ್ವಾಚಾರ್ಯರ ಚರಿತ್ರಕ್ಕೆ ಸಂಬಂಧಪಟ್ಟ ಉಡುಪಿ, ವಿಮಾನಗಿರಿ, ಪಾಜಕಕ್ಷೇತ್ರ, ಗದಾತೀರ್ಥ, ಬಾಣತೀರ್ಥ, ಪರಶುತೀರ್ಥ, ಧನುಸ್ತೀರ್ಥ, ವಾಸುದೇವತೀರ್ಥ, ಪಶ್ಚಿಮ ಸಮುದ್ರತೀರದಲ್ಲಿರುವ ಒಡಭಾಂಡೇಶ್ವರ, ಹಾಗೂ ಬಾರ್ಕೂರಿನಲ್ಲಿರುವ ಭಂಡಾರಿಕೇರಿಮಠ ಮೊದಲಾದ ಸ್ಥಳಗಳಿಗೆ ಹೋಗಿ, ಅವುಗಳನ್ನು ಚಿಕಿತ್ಸಕ ದೃಷ್ಟಿಯಿಂದ ನಿರೀಕ್ಷಿಸಿದೆನು. ಇದಲ್ಲದೆ ಉಡುಪಿಯಲ್ಲಿ "ಶ್ರೀಮನ್ಮಧ್ವಾಚಾರ್ಯರ ಕಾಲನಿರ್ಣಯ" ಪ್ರಭೃತಿ ನಾಲ್ಕು ಐತಿಹಾಸಿಕ ಉಪನ್ಯಾಸಗಳನ್ನು ಹೇಳಿದೆನು. ಮೇಲೆ ಹೇಳಿದ ಈ ಸ್ಥಳಗಳನ್ನು ತೋರಿಸುವುದಕ್ಕೆ ಶ್ರೀಮಾನ್ ರಾಜಗೋಪಾಲ ಕೃಷ್ಣರಾಯರು ವೇ॥ ಎಸ್. ಶ್ರೀನಿವಾಸಾಚಾರ್ಯರೆಂಬುವರನ್ನು ನನ್ನ ಜೊತೆಗೆ ಕಳುಹಿಸಿಕೊಟ್ಟದ್ದಲ್ಲದೆ, ಆಯಾ ಸ್ಥಳದ ಮುಖಂಡರಿಗೆ ಪತ್ರವನ್ನು ಕೊಟ್ಟು, ಸಂಶೋಧನ ಕಾರ್ಯಕ್ಕೆ ಎಲ್ಲ ತರದ ಅನುಕೂಲತೆಯನ್ನುಂಟುಮಾಡಿ ಕೊಟ್ಟದ್ದರಿಂದ ಈ ಮಹನೀಯರಿಗೆ ಪ್ರೇಮಪೂರ್ವಕವಾಗಿ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ತದನಂತರ ಉಡುಪಿಯಿಂದ ಕಾಣ್ವತೀರ್ಥದ ಕಡೆಗೆ ಹೊರಟೆನು. ಮಾರ್ಗದಲ್ಲಿ ಕಾರ್ಕಳ, ಮೂಡಬಿದರೆ, ಮಂಗಳೂರುಗಳಲ್ಲಿ ಐತಿಹಾಸಿಕ ಉಪನ್ಯಾಸಗಳನ್ನು ಹೇಳುತ್ತ ಕಾಣ್ವತೀರ್ಥಕ್ಕೆ ಹೋಗಿ ತಲಪಿದೆನು. ಈ

ಕಾಣ್ವತೀರ್ಥದ ಹಾಗೂ ಕಾಣ್ವತೀರ್ಥದ ಬಳಿಯಲ್ಲಿ ಶ್ರೀಮನ್ಮಧ್ವಾಚಾರ್ಯರು ತಮ್ಮ ಶಿಷ್ಯರಿಗೆ ಸನ್ಯಾಸಾಶ್ರಮವನ್ನು ಕೊಟ್ಟ ಸ್ಥಳವಾದ ಕಟ್ಟೆಯ ಫೋಟೋಗಳನ್ನು ತೆಗೆದುಕೊಂಡು ಅವುಗಳ ಪಡಿಯಚ್ಚುಗಳನ್ನು ಮಾಡಿಸಿ, ಈ ಕಾಣ್ವತೀರ್ಥದ ಮತ್ತು ಈ ಕಟ್ಟೆಯ ಭಾವಚಿತ್ರಗಳನ್ನು ಶ್ರೀಮಧ್ವಾಚಾರ್ಯರ ಚರಿತ್ರದಲ್ಲಿ ಕಾಣ್ವತೀರ್ಥದ ವರ್ಣನೆಯ ಸ್ಥಳದಲ್ಲಿ ಮುದ್ರಿಸಬೇಕಾಗುತ್ತದೆಂದು ತಿಳುಹಿಸಲು ನಮ್ಮ ಮಿತ್ರರಾದ ಶ್ರೀಮಾನ್ ರಾಘವೇಂದ್ರರಾವ ಶೇಣ್ವೈ ಎಮ್. ಎ. ಇವರು 'ಕ್ಯಾಮರಾ' ತೆಗೆದುಕೊಂಡು, ನನ್ನ ಜೊತೆಗೆ ಮಂಗಳೂರಿನಿಂದ ಕಾಣ್ವತೀರ್ಥಕ್ಕೆ ಬಂದರು. ಈ ಕಾಣ್ವತೀರ್ಥವು, ಮಂಜೇಶ್ವರ ಗ್ರಾಮಕ್ಕೆ ಸಮೀಪವಾಗಿದ್ದುದರಿಂದ ಮಂಜೇಶ್ವರದ ಸುಪ್ರಸಿದ್ಧ ಕವಿಗಳೂ ಇತಿಹಾಸಸಂಶೋಧಕರೂ ಆದ ಶ್ರೀಮಾನ್ ಗೋವಿಂದ ಪೈಗಳವರ ಸಾಹಾಯ್ಯದಿಂದ ಇವೆರಡೂ ಸ್ಥಳಗಳ ಫೋಟೋಗಳನ್ನು ತೆಗೆದುಕೊಂಡು, ಮಂಗಳೂರಿಗೆ ತಿರುಗಿ ಬಂದೆವು. ಈ ಮಹನೀಯರಿಬ್ಬರ ಉಪಕಾರವು ಚಿರಸ್ಮರಣೀಯವಾಗಿದೆ. ಈ ಉಪಕಾರಕ್ಕೋಸ್ಕರ ಈ ಉಭಯ ಸದ್ಗೃಹಸ್ಥರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ.

ಮಂಗಳೂರಿನ ಸುಪ್ರಸಿದ್ಧ ಜ್ಞಾನವೃದ್ಧರಾದ ಶ್ರೀಮಾನ್ ಪಂಜೆ ಮಂಗೇಶರಾವ್ ಬಿ. ಎ., ಎಲ್. ಟಿ. ಈ ಮಹಾಶಯರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಕೆಲವು ಸಂಪ್ರದಾಯಗಳನ್ನು ಸೋಪಪತ್ತಿಕವಾಗಿಯೂ ಸಪ್ರಮಾಣವಾಗಿಯೂ ವಿವರಿಸಿಹೇಳಿ, ನನಗೆ ಅವುಗಳ ಪರಿಚಯ ಮಾಡಿಕೊಟ್ಟು, ನನ್ನ ಮೇಲೆ ಅನಂತ ಉಪಕಾರವನ್ನು ಮಾಡಿದ್ದಾರೆ. ಅತಏವ ಈ ಮಹನೀಯರಿಗೆ ನನ್ನ ಅನಂತ ವಂದನೆಗಳು.

ಹಾಗೆಯೇ ಮಂಗಳೂರಿನ '**ಕಂಠೀರವ**' ಪತ್ರಿಕೆಯ ಸಂಪಾದಕರಾದ ಶ್ರೀಮಾನ್ ಹುರಳಿ ಭೀಮರಾಯರೂ ನನ್ನ ಸಂಶೋಧನಕಾರ್ಯಕ್ಕೆ ತಕ್ಕ ಅನುಕೂಲ್ಯಗಳನ್ನು ಒದಗಿಸಿಕೊಟ್ಟದ್ದಕ್ಕೋಸ್ಕರ ಇವರಿಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಈ ಪ್ರಕಾರ ಶ್ರೀಮನ್ಮಧ್ವಾಚಾರ್ಯರ ಚರಿತ್ರವನ್ನು ಚಿಕಿತ್ಸಕ ದೃಷ್ಟಿಯಿಂದ ಅಭ್ಯಾಸ ಮಾಡುವುದಕ್ಕೋಸ್ಕರ ಉಡುಪಿಯಿಂದ ಕಾಣ್ವ

ತೀರ್ಥದ ವರೆಗೆ ೪೫ ಮೈಲುಗಳಲ್ಲಿ ಎಡೆಬಿಡದೆ ಎರಡು ತಿಂಗಳ ತನಕ ಸಂಚಾರ ಮಾಡಬೇಕಾಯಿತು. ತರುವಾಯ ಮಂಗಳೂರಿನಿಂದ ಹೊರಟು, ಚಾರ್ಮಾಡಿ ಘಟ್ಟದ ಮೇಲಿಂದ ಕಡೂರು ಮಾರ್ಗವಾಗಿ ಧಾರವಾಡಕ್ಕೆ ಬಂದೆನು. ತನಂತರ ಶ್ರೀಮದಾನಂದ ತೀರ್ಥರ ಹಾಗೂ ಶ್ರೀಮಜ್ಜಯ ತೀರ್ಥರ ಸಚ್ಚರಿತ್ರಗಳನ್ನು ಬರೆಯಲಾರಂಭಿಸಿದೆನು.

ಈ ನನ್ನ ಲೇಖನಕಾರ್ಯಕ್ಕೆ ಅವಶ್ಯವಿದ್ದ ದ್ವೈತಮತದ ಗ್ರಂಥಗಳನ್ನೂ ದ್ವೈತ ಮಠಗಳ ಗುರುಪರಂಪರಾ ಪೀಳಿಗೆಗಳನ್ನೂ ಹಾಗೂ ಅದ್ವೈತ, ವಿಶಿಷ್ಟಾದ್ವೈತ ಮತಗಳ ಗ್ರಂಥಗಳನ್ನೂ ನಾನು ಬೇಡಿದಾಕ್ಷಣವೇ ಕೊಟ್ಟು ಸಾಹಾಯ್ಯವನ್ನು ಮಾಡಿದ ಸದ್ಗೃಹಸ್ಥರ ಉಪಕಾರವನ್ನು ಸ್ಮರಿಸಿ, ಮುಂದಕ್ಕೆ ಸಾಗುತ್ತೇನೆ.

ಧಾರವಾಡದ ಮಾಧ್ವಪಾಠಶಾಲೆಯ ಅಧ್ಯಾಪಕರಾದ ವೇ. ಶಾ. ಸಂ. ಹುಯಿಲಗೋಳ ರಾಮಾಚಾರ್ಯರು, ಶ್ರೀಮಾನ್ ಡಾಕ್ಟರ ಕಾಂತರಾವ ಶ್ರೀನಿವಾಸರಾವ ಕಮಲಾಪೂರ ಎಲ್. ಸಿ. ಪಿ. ಎಸ್. ಹಾಗೂ ಶ್ರೀಮಾನ್ ನರಸಿಂಗರಾವ ಶ್ರೀನಿವಾಸರಾವ ಕಮಲಾಪೂರ ಬಿ. ಎ., ಎಲ್ ಎಲ್. ಬಿ. ಈ ಉಭಯ ಬಂಧುಗಳು, ಫಿಮೇಲ ಟ್ರೇನಿಂಗ ಕಾಲೇಜದ ಅಧ್ಯಾಪಕರಾದ ಶ್ರೀಮಾನ್ ತಟ್ಟಿ ಶಾಮರಾಯರು ಬಿ. ಎ. ಈ ನಾಲ್ಕು ಜನ ಮಹಾಶಯರು ತಮ್ಮಲ್ಲಿರುವ ಗ್ರಂಥ ಸಂಗ್ರಹದ ಲಾಭವು ನನಗೆ ಸುಲಭವಾಗಿ ಕಾಲಕಾಲಕ್ಕೆ ದೊರೆಯುವಂತೆ ಸಾಹಾಯ್ಯವನ್ನು ಮಾಡಿದರು. ಕಣ್ವಮಠದ ದಿವಾಣರಾದ ವೇ. ಶಾ. ಸಂ. ಕನಕಗಿರಿ ರಾಜಗೋಪಾಲಾಚಾರ್ಯರು ಸುರಪುರ ಇವರು ಶ್ರೀ ಕಣ್ವಮಠದ ಗುರುಪರಂಪರಾಪೀಳಿಗೆಯನ್ನು ಸಪ್ರಮಾಣವಾಗಿ ಬರೆದುಕೊಟ್ಟರು. ಇದೇ ಮೇರೆಗೆ ಶ್ರೀಮಾನ್ ನಾರಾಯಣರಾವ ರಾಘವೇಂದ್ರರಾವ ದೇಶಪಾಂಡೆ ಬಿ. ಎ. ಎಲ್‌ಎಲ್. ಬಿ. ಧಾರವಾಡ ಇವರು ಶ್ರೀರಾಘವೇಂದ್ರ ಸ್ವಾಮಿಗಳ ಮಠದ ಗುರುಪರಂಪರಾಪೀಳಿಗೆಯನ್ನು ಕೊಟ್ಟರು. ಇದಲ್ಲದೆ ವೇ. ಶಾ. ಸಂ. ಶಿರಗುಪ್ಪಿ ವೆಂಕಣ್ಣಾಚಾರ್ಯರು ಹುಬ್ಬಳ್ಳಿ ಮತ್ತು ಶ್ರೀಮಾನ್ ವೆಂಕಟರಾವ ಭೀಮರಾವ ಆಲೂರ ಬಿ. ಎ., ಎಲ್‌ಎಲ್. ಬಿ. ಧಾರವಾಡ ಈ ಉಭಯ ಮಹಾಶಯರು, ದೈವಜ್ಞ ಭೀಮಾಚಾರ್ಯ ವಿರಚಿತ "ಶ್ರೀ

ಪೂರ್ಣಬೋಧ ಗುರುವಂಶ ಕಥಾಕಲ್ಪತರು " ಎಂಬ ಹಸ್ತಲಿಖಿತ ಗ್ರಂಥದ ಪ್ರತಿಗಳನ್ನು ಕೊಟ್ಟು, ಸಾಹಾಯ್ಯ ಮಾಡಿದರು. ಈ ಮಹನೀಯರೆಲ್ಲರಿಗೂ ಮತ್ತು ಅದ್ವೈತ, ವಿಶಿಷ್ಟಾದ್ವೈತ ಮತಗಳ ಗ್ರಂಥಗಳನ್ನು ನಾನು ಕೇಳಿದಾಕ್ಷಣವೇ ಕೊಟ್ಟಂಥ ಧಾರವಾಡಸ್ಥರಾದ ವೇದಮೂರ್ತಿ ಬ್ರಹ್ಮಶ್ರೀ ತ್ರಿಕಾಂಡ ಮಂಡನಾಚಾರ್ಯರಾದ ದಂಡಪತೆ ಮಹಾದೇವ ದೀಕ್ಷಿತರವರಿಗೂ ವೇ. ಶಾ. ಸಂ. ಪರಮ ಪೂಜ್ಯರಾದ ಬಡ್ಲಿ ಚಿದಂಬರ ದೀಕ್ಷಿತರವರಿಗೂ ಹಾಗೂ ಅದ್ವೈತವೇದಾಂತ ವಿಶಾರದರಾದ ಪ್ರೊ. ಎನ್. ಆರ್. ಕುಲಕರ್ಣಿ ಎಮ್. ಎ, ಎಲ್ಎಲ್. ಬಿ. ಬೈಲಹೊಂಗಲ ಇವರಿಗೂ ನಾನು ತುಂಬಾ ಕೃತಜ್ಞನಾಗಿದ್ದೇನೆ.

ಶ್ರೀಮದಚ್ಯುತ ಪ್ರೇಕ್ಷಾಚಾರ್ಯರು ತಮ್ಮ ಶಿಷ್ಯರಾದ ಶ್ರೀಮಧ್ವಾಚಾರ್ಯರಿಗೆ, ವಿಮುಕ್ತಾತ್ಮರು ರಚಿಸಿದ **'ಇಷ್ಟಸಿದ್ಧಿ'** ಎಂಬ ಅದ್ವೈತ ಮತಗ್ರಂಥದ ಮಂಗಲಾಚರಣದ **ಆದ್ಯ ಪದ್ಯ**ವನ್ನು ಪಾಠ ಹೇಳಿದರೆಂಬುದು ಸುಮಧ್ವವಿಜಯದಲ್ಲಿ (೪-೪೪।೪೫) ಉಕ್ತವಾಗಿದ್ದುದು ಸುಪ್ರಸಿದ್ಧವಾಗಿಯೇ ಇದೆ. ಆದರೆ ಬಡೋದಾ ಸಂಸ್ಥಾನಾಧಿಪತಿಗಳಾದ ಶ್ರೀ ಸಯಾಜಿರಾವ ಗಾಯಕವಾಡ ಮಹಾರಾಜರವರ ಕೃಪೆಯಿಂದ " ಗಾಯಕವಾಡ ಓರಿಯಂಟಲ್ ಸಿರೀಜ"ದಲ್ಲಿ ಶ್ರೀಮಾನ್ ಎಂ. ಹಿರಿಯಣ್ಣನವರು ಎಮ್. ಎ. ಇವರು ಕ್ರಿ. ಶ. ೧೯೩೩ರಲ್ಲಿ ಈ ಇಷ್ಟಸಿದ್ಧಿ ಗ್ರಂಥವನ್ನು ಪ್ರಸಿದ್ಧ ಮಾಡುವವರೆಗೂ ಆ ಆದ್ಯಪದ್ಯವು ಯಾವುದು? ಎಂಬುದು ಅರ್ವಾಚೀನ ಜನರಿಗೆ ಗೊತ್ತಿರಲಿಲ್ಲ. ನಮ್ಮ ಮಿತ್ರರಾದ ಪ್ರೊ ಎನ್. ಆರ್. ಕುಲಕರ್ಣಿ ಎಮ್. ಎ., ಎಲ್ ಎಲ್. ಬಿ. ಇವರು ಈ ಇಷ್ಟಸಿದ್ಧಿಗ್ರಂಥವನ್ನು ತರಿಸಿದ್ದಾರೆಂಬುದು ಗೊತ್ತಾದ ಕೂಡಲೇ ಇವರಿಂದ ಈ ಪುಸ್ತಕವನ್ನು ಇಸುಕೊಂಡದ್ದಲ್ಲದೆ, ಇವರು ಅದ್ವೈತವೇದಾಂತದಲ್ಲಿ ನಿಷ್ಣಾತರಾಗಿದ್ದುದರಿಂದ ಈ ಇಷ್ಟಸಿದ್ಧಿಗ್ರಂಥದ ಮಂಗಲಾಚರಣದ ಈ ಆದ್ಯಪದ್ಯಕ್ಕೆ ಅರ್ಥವನ್ನು ಬರೆಯಲು ನಾನು ಇವರಿಗೆ ಬಿನ್ನವಿಸಿದೆನು. ಆ ಪ್ರಕಾರ ಇವರು ಬರೆದು ಕಳುಹಿಸಿದರು. ಇಷ್ಟಸಿದ್ಧಿ ಗ್ರಂಥದ ಈ ಆದ್ಯ ಪದ್ಯವನ್ನೂ ಇದರ ಅರ್ಥವನ್ನೂ ನಮ್ಮ ವಾಚಕರ ಅವಗಾಹನಕ್ಕಾಗಿ ಇದರಡಿಯಲ್ಲಿ ಹೇಳಿದ್ದೇನೆ.

ಯದಾನುಭೂತಿರಜಾನಂತ್ಯಾ ಯಾನಸ್ವಾತ್ಮಾ ನಸ್ವಿಗ್ರಹಾ ।
ಮಹದಾದಿ ಜಗನ್ಮಾಯಾ ಚಿತ್ರಭಿತ್ತಿಂ ನಮಾಮಿ ತಾಮ್ ॥೧॥

ಅರ್ಥ:—(ಅನುಭವ, ಚೈತನ್ಯ, ಅಥವಾ ಜ್ಞಾನವೆಂದರೇನೆಂಬುದು ಎಲ್ಲರಿಗೂ ತಿಳಿದ ವಿಷಯು. ಅದು ಸ್ವತಃಸಿದ್ಧವೂ ಸ್ವಯಂಪ್ರಕಾಶವೂ ಆಗಿದೆ. ಯಾಕೆಂದರೆ, 'ಅದು ಇಲ್ಲವೆಂ'ದು ಹೇಳುವುದೂ ಕೂಡ ಜ್ಞಾನ ಅಥವಾ ಚೈತನ್ಯವೇ ಸರಿ. ಹೀಗೆ 'ಅದು ಇಲ್ಲವೆ'ನ್ನಬೇಕಾದರೂ ಸಹ, ಮೂಲತಃ ಅದರ ಅಸ್ತಿತ್ವವನ್ನು ಒಪ್ಪಲೇ ಬೇಕಾಗುವುದು! ಎಂತೆಯೋ ಅದು) ಹುಟ್ಟಿಲ್ಲದ್ದು; (ಎಂತೆಯೋ ಪ್ರತ್ಯಕ್ಷಾದಿ ಪ್ರಮಾಣಗಳಿಗೆ) ತಿಳಿಯು ಬಾರದುದು; (ಎಂತೆಯೋ ದೇಶ, ಕಾಲ, ಮತ್ತು ವಸ್ತುಗಳಲ್ಲಿ ಯಾವುದರ ವ್ಯಾಪ್ತಿಯಿಂದಲೂ) ಸೀಮೆ (ಅಥವಾ ಕೊನೆ)ಯಿಲ್ಲದ್ದು; (ಅದೇ ನಮ್ಮೆಲ್ಲರ) ಆತ್ಮವಾಗಿಯೂ (ಎಂದರೆ ಸ್ವರೂಪವಾಗಿಯೂ) ಆನಂದಮೂರ್ತಿಯಾ ಗಿಯೂ ಇರುವುದು. (ಇಂತಹ) ಯಾವ ಅನುಭವವು (ಅಥವಾ ಚಿದ್ರೂಪ ಪರಮಾರ್ಥ ವಸ್ತುವು) ಇರುವುದೋ (ಮತ್ತು) ಯಾವುದು ಮಹತ್ ಮೊದಲಾದ (ರೂಪದಿಂದ ಹುಟ್ಟಿ ಕಾಣಿಸುತ್ತಿರುವ) ಜಗತ್ತೆಂಬ ಸುಳ್ಳು [ಅಥವಾ ತೋರಿಕೆಯು] ಚಿತ್ರಕ್ಕೆ [ಆಧಾರವಾದ] ಗೋಡೆಯಂತಿರು ವುದೋ, [ಎಂದರೆ ಯಾವ ಸದ್ವಸ್ತುವಿನ ಮೇಲೆ ಮಹತ್ ಮೊದಲಾದ ತತ್ತ್ವಗಳ ರೂಪವಾಗಿ ಹೊರಟು, ಈ ವಿಚಿತ್ರವಾದ ಮತ್ತು ಕಲ್ಪಿತವಾದ ಜಗದ್ರೂಪ ಚಿತ್ರವೆಂಬುದು ಕಾಣಿಸಿಕೊಳ್ಳುತ್ತಿರುವುದೋ] ಅಂತಹ ಸದ್ವ ಸ್ತುವಿಗೆ [ಎಂದರೆ ಸಚ್ಚಿದಾನಂದ ಪರಬ್ರಹ್ಮನಿಗೆ] ನಮಸ್ಕಾರ ಮಾಡು ತ್ತೇನೆ.

ಹುಬ್ಬಳ್ಳಿಯ ಸುಪ್ರಸಿದ್ಧ ಜ್ಯೋತಿಷಿಗಳಾದ ವೇ. ಶಾ. ಸಂ. ರಾಮ ಭಟ್ಟರವರು ಈ ಗ್ರಂಥಲೇಖನ ಕಾರ್ಯಕ್ಕೆ ದ್ರವ್ಯಾನುಕೂಲ್ಯವನ್ನು ಮಾಡಿ ಕೊಡುವುದಕ್ಕೋಸ್ಕರ ಆರಂಭದಿಂದಲೂ ಅವಿಶ್ರಾಂತ ಪರಿಶ್ರಮವನ್ನು ವಹಿ ಸಿದರು.

ಶ್ರೀ ಮಾನ್ ಡಿ. ಟಿ. ನರಗುಂದಕರ ರಿಟಾಯರ್ಡ ಪೋಲೀಸ ಇನಸ್ಪೆಕ್ಟರ ಧಾರವಾಡ ಇವರು ತಮ್ಮ ಸ್ವರ್ಗೀಯ ಪರಮಪೂಜ್ಯ ಮಾತುಶ್ರೀ ರಾಧಾಬಾಯಿಯವರ ಸ್ಮಾರಕಾರ್ಥವಾಗಿ ೫೦ ರೂಪಾಯಿಗಳನ್ನು

ಈ ಲೇಖನಕಾರ್ಯಕ್ಕೆ ದಯೆಪಾಲಿಸಿದರು. ಇದೇ ಮೇರೆಗೆ ಶ್ರೀಮಾನ್ ನೀಲಕಂಠರಾವ ಮಾರ್ತಾಂಡರಾವ ಕುಲಕರ್ಣಿ ಮುನಿಗೇರಿ (ತಾ॥ ರೋಣ) ಇವರು ೫೦ ರೂಪಾಯಿಗಳನ್ನೂ, ಹಾಗೂ ಶ್ರೀಮಾನ್ ಶ್ರೀಶೈಲರಾವ ಹಾಯಕೋರ್ಟ ವಕೀಲರು ರಾಯಚೂರು ಇವರು ೫೫ ರೂಪಾಯಿಗಳನ್ನೂ ಕೊಟ್ಟು, ಈ ಕಾರ್ಯಕ್ಕೆ ದೊಡ್ಡ ಸಾಹಾಯ್ಯವನ್ನು ಮಾಡಿದರು. ಈ ಪ್ರಕಾರ ಈ ಮೂವರು ಮಹನೀಯರು ದ್ರವ್ಯಸಾಹಾಯ್ಯವನ್ನು ಮಾಡಿದ್ದರಿಂದಲೇ ಈ ಲೇಖನಕಾರ್ಯವು ಉತ್ತಮರೀತಿಯಿಂದ ನೆರವೇರಿತು.

ಇವರಲ್ಲದೆ ಶ್ರೀ. ಬಳವಂತರಾವ ನಾಡಗೌಡ ಗದಗ, ಶ್ರೀ. ಕೃಷ್ಣಾಚಾರ್ಯ ಹೊಸ್ಕತ್ತಿ ಧಾರವಾಡ, ಶ್ರೀ. ವೈದ್ಯಭೂಷಣ ದಾಮೋದರ ಅನಂತ ಹಲಸಗೀಕರ ಹುಬ್ಬಳ್ಳಿ, ಶ್ರೀ. ಕೆ. ಪಿ. ಕುಲಕರ್ಣಿ ಇಳಕಲ, ಶ್ರೀ. ಕೆ. ಬಿ. ಜೋಶಿ ಬಿ. ಎ. ಕುಂದಗೋಳ ಶ್ರೀ. ರಾಮರಾವ ಕುಲಕರ್ಣಿ ಮುಳಗುಂದ ಪ್ರಭೃತಿ ಸದ್ಗೃಹಸ್ಥರೂ ಈ ಲೇಖನಕಾರ್ಯಕ್ಕೆ ತುಸುಮಟ್ಟಿಗಾದರೂ ಯೋಗ್ಯ ಸಮಯದಲ್ಲಿ ದ್ರವ್ಯಸಾಹಾಯ್ಯವನ್ನು ಮಾಡಿದ್ದಾರೆ. ಇದಲ್ಲದೆ ಈ ಲೇಖನಕಾರ್ಯಕ್ಕೆ ಒಂದು ತರಹದಿಂದ ಶ್ರೀಮಾನ್ ಲಕ್ಷ್ಮಣರಾವ ಮುತಾಲೀಕದೇಸಾಯಿ ಬಿ. ಎ., ಎಲ್‌ಎಲ್. ಬಿ. ವಕೀಲರೂ ಚೆನ್ನಾಗಿ ದ್ರವ್ಯಸಾಹಾಯ್ಯವನ್ನು ಮಾಡಿದ್ದಾರೆ. ಈ ಮಹಾಶಯರೆಲ್ಲರಿಗೆ ಕೃತಜ್ಞತಾಪೂರ್ವಕವಾದ ನನ್ನ ವಂದನೆಗಳನ್ನು ಸ್ವತಃಪೂರ್ವಕವಾಗಿ ಸಮರ್ಪಿಸುತ್ತೇನೆ.

ಶ್ರೀಮಾನ್ ವೆ. ತಿ. ಗಂಗನಾಥರಾವ, ವೇ. ಶ್ರೀ. ಸಂ. ಶ್ಯಾನಭಾಗ ನಾರಾಯಣಶಾಸ್ತ್ರಿಗಳವರು ಪ್ರಭೃತಿ ಅನೇಕ ಜನ ಮಹನೀಯರು ಈ ಕಾರ್ಯಕ್ಕೆ ಪ್ರೋತ್ಸಾಹಿಸಿದರು. ಇವರೆಲ್ಲರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಲೇಖನಕಾರ್ಯಕ್ಕೆ ಸಹಾಯಕರಾದ "ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ" ಗ್ರಂಥದ ಕರ್ತೃಗಳಾದ ಪ್ರೊ. ವಿದ್ವಾನ್ ಎಚ್. ಎನ್. ರಾಘವೇಂದ್ರಾಚಾರ್ಯರು ಎಂ. ಎ. (ಮಹಾರಾಜರವರ ಕಾಲೇಜು

ಮೈಸೂರು) ಪ್ರಭೃತಿ ಗ್ರಂಥಕಾರರಿಗೂ ನನ್ನ ವಂದನೆಗಳನ್ನು ಮನಃ ಪೂರ್ವಕವಾಗಿ ಸಮರ್ಪಿಸುತ್ತೇನೆ.

ಧಾರವಾಡ
ತಾ. ೨೪–೩–೩೬ } **ನಾ. ಶ್ರೀ. ರಾಜಪುರೋಹಿತ**

# ವಿಷಯಾನುಕ್ರಮಣಿಕೆ



# ಶ್ರೀಮನ್ಮಧ್ವಾಚಾರ್ಯರ ಚರಿತ್ರೆ



ಧರ್ಮ ವಿಜ್ಞಾನ ವೈರಾಗ್ಯ ಪರಮೈಶ್ವರ್ಯ ಶಾಲಿನಃ।
ಆನಂದತೀರ್ಥ ಭಗವತ್ಪಾದಾನ್ ವಂದೇ ನಿರಂತರಂ ॥೧॥

(ಶ್ರೀಪದ್ಮನಾಭತೀರ್ಥ ಭಿಕ್ಷುಃ)

## ೧ನೆಯ ಅಧ್ಯಾಯ

### ಪೂರ್ವೇತಿಹಾಸ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರವರು ಅವತರಿಸುವುದಕ್ಕಿಂತ ಮೊದಲು ಕರ್ನಾಟಕದಲ್ಲಿ ಕಿಂಬಹುನಾ ಅಖಿಲ ಭರತ ಖಂಡದಲ್ಲಿ ವಿಷ್ಣುಭಕ್ತಿಯೂ ದ್ವೈತಸಿದ್ಧಾಂತವೂ ಅಡಗಿ ಹೋಗಿದ್ದವು. ಈ ಪ್ರಕಾರ ದ್ವೈತಸಿದ್ಧಾಂತಕ್ಕೂ ವಿಷ್ಣುಭಕ್ತಿಗೂ ಗ್ಲಾನಿಯುಂ ಬಂದೊದಗಿದಾಗ ಕ್ರಿ. ಶ. ೧೨೩೮ರಲ್ಲಿ ಶ್ರೀಮನ್ಮಧ್ವಾಚಾರ್ಯರು ಅವತರಿಸಿ, ದ್ವೈತಸಿದ್ಧಾಂತದ ಪುನರುಜ್ಜೀವನವನ್ನೂ ವಿಷ್ಣುಭಕ್ತಿಯ ಪುನರುಜ್ಜೀವನವನ್ನೂ ಮಾಡಿದರು. ಅರ್ಥಾತ್ ಶ್ರೀಮಧ್ವಾಚಾರ್ಯರ ಅವತಾರ ಕಾರ್ಯಗಳೆಂದರೆ,

---

೧ ಶ್ರೀ ಗೀತಾ ತಾತ್ಪರ್ಯ ನಿರ್ಣಯ ಟೀಕಾದಿಯಲ್ಲಿ ಶ್ರೀಜಯತೀರ್ಥರು ಶ್ರೀಮನ್ಮಧ್ವಾಚಾರ್ಯರನ್ನು ಸ್ತುತಿಸಿದ್ದಾರೆ.

೨ ೧ನೆಯ ಪರಿಶಿಷ್ಟದಲ್ಲಿ ಶ್ರೀಮಧ್ವಾಚಾರ್ಯರ ಕಾಲ ನಿರ್ಣಯವನ್ನು ಮಾಡಿದ್ದೇವೆ. ನೋಡಿರಿ.

(೧) ದ್ವೈತಮತವನ್ನು ಪುನರುಜ್ಜೀವನಗೊಳಿಸಿರುವುದು.
(೨) ವಿಷ್ಣುಭಕ್ತಿಯನ್ನು ಪುನರುಜ್ಜೀವನಗೊಳಿಸಿರುವುದು.

ಇವೇ ಎರಡು ಮುಖ್ಯವಾದುವುಗಳೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಈ ಅಧ್ಯಾಯದಲ್ಲಿ ಮೊಟ್ಟಮೊದಲು ದ್ವೈತಾದ್ವೈತ ವಿಶಿಷ್ಟಾದ್ವೈತ ಮತಗಳ ಪೂರ್ವೇತಿಹಾಸವನ್ನೂ, ಶಿವಭಕ್ತಿ, ವಿಷ್ಣುಭಕ್ತಿಗಳ ಪೂರ್ವೇತಿಹಾಸವನ್ನೂ, ವಿವರಿಸಿ ಸ್ಪಷ್ಟಮಾಡಿಬಿಟ್ಟರೆ, ಮುಂದೆ ಹೇಳಲ್ಪಡುವ ಶ್ರೀಮಧ್ವಾಚಾರ್ಯರ ಚರಿತ್ರೆಯು ವಾಚಕರಿಗೆ ಸುಲಭವಾಗಿ ತಿಳಿಯುವುದು.

**ದ್ವೈತಮತದ ಪೂರ್ವೇತಿಹಾಸ:—** ಶ್ರೀಮಧ್ವಾಚಾರ್ಯರು ಅವತರಿಸುವುದಕ್ಕಿಂತ ಬಹು ಪ್ರಾಚೀನಕಾಲದಲ್ಲಿಯೇ ಎಂದರೆ ವೇದಕಾಲದಲ್ಲಿಯೇ ಉಪನಿಷತ್ತುಗಳು ದ್ವೈತಸಿದ್ಧಾಂತವನ್ನು ಘಂಟಾಘೋಷವಾಗಿ ಹೇಳುತ್ತವೆಂಬುದನ್ನು ಶ್ರೀವೇದವ್ಯಾಸರು ಬೃಹದಾರಣ್ಯಕೋಪನಿಷತ್ತಿನ ಆಧಾರದಿಂದ ಒಂದು ಸೂತ್ರದಲ್ಲಿ ಹೀಗೆ ಹೇಳಿದ್ದಾರೆ:—

**॥ ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮ-**
**-ಧೀಯತೇ ಓಂ॥**

(ಬ್ರಹ್ಮಸೂತ್ರ ಅ. ೧, ಪಾ. ೨, ಸೂ. ೨೦)

ಎಂದರೆ, ಕಾಣ್ವಶಾಖೆಯ ಬ್ರಾಹ್ಮಣರೂ. ಮಾಧ್ಯಂದಿನ ಶಾಖೆಯ ಬ್ರಾಹ್ಮಣರೂ ಈ ಉಭಯ ಶಾಖೆಯವರೂ ದ್ವೈತಸಿದ್ಧಾಂತವನ್ನು ಕಂಠೋಕ್ತವಾಗಿ ಹೀಗೆ ಹೇಳಿದ್ದಾರೆ:—

೧ "ವಿಜ್ಞಾನಾದಂತರ ಇತಿ ಕಾಣ್ವಾಃ" ಎಂದರೆ ಜೀವನಿಂದ ಪರಮಾತ್ಮನು ಭಿನ್ನನಾಗಿದ್ದಾನೆಂದು ಕಾಣ್ವಶಾಖೆಯ ಬ್ರಾಹ್ಮಣರು ಅನ್ನುತ್ತಾರೆ.

---

೧ ಈ ದ್ವೈತಸಿದ್ಧಾಂತವು ಕಾಣ್ವಪಾಠದ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಮಾಧ್ಯಂದಿನ ಪಾಠದ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ೩ನೆಯ ಅಧ್ಯಾಯದ ೭ನೆಯ ಬ್ರಾಹ್ಮಣದ ೨೨ನೆಯ ಮಂತ್ರದಲ್ಲಿ ಉಕ್ತವಾಗಿದೆ.

" ಆತ್ಮನೋಽಂತರ ಇತಿ ಮಾಧ್ಯಂದಿನಾಃ " ಎಂದರೆ ಜೀವನಿಂದ ಪರಮಾತ್ಮನು ಬೇರೆಯಾಗಿದ್ದಾನೆಂದು ಮಾಧ್ಯಂದಿನ ಶಾಖೆಯ ಬ್ರಾಹ್ಮಣರು ಅನ್ನುತ್ತಾರೆ.

ಸಾರಾಂಶ, ವೇದಕಾಲದಲ್ಲಿಯೇ ಕಾಣ್ವಶಾಖೆಯ ಬ್ರಾಹ್ಮಣರೂ ಮಾಧ್ಯಂದಿಸ ಶಾಖೆಯ ಬ್ರಾಹ್ಮಣರೂ ಜೀವ, ಈಶ ಭೇದವನ್ನು ಅರ್ಥಾತ್ ದ್ವೈತಸಿದ್ಧಾಂತವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಅತಏವ ಈ ಉಭಯ ಶಾಖೆಯವರು ದ್ವೈತಮತಸ್ಥರಾಗಿದ್ದಾರೆಂಬುದು ಸಿದ್ಧ.

ಫಲಿತಾರ್ಥವೇನೆಂದರೆ, ಕಾಣ್ವಶಾಖೆಯ ಬ್ರಾಹ್ಮಣರು ಮೂಲತಃ ದ್ವೈತಮತಸ್ಥರಾಗಿಯೇ ಇದ್ದಾರೆಂಬುದು ಈ ಬ್ರಹ್ಮಸೂತ್ರದಿಂದ (ಅರ್ಥಾತ್ ಬೃಹದಾರಣ್ಯಕೋಪನಿಷತ್ತಿನಿಂದ) ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಇನ್ನು ಈ ಪ್ರಕಾರ ಮೂಲತಃ ದ್ವೈತಮತಸ್ಥರಾಗಿಯೇ ಇದ್ದಂಥ [1]ಕಾಣ್ವಶಾಖೆಯ ಬ್ರಾಹ್ಮಣರಲ್ಲಿಯೇ ದ್ವೈತಮತೋದ್ಧಾರಕರಾದ ಶ್ರೀಮನ್ಮಧ್ವಾಚಾರ್ಯರೂ ಶ್ರೀಮಟ್ಟೀಕಾಚಾರ್ಯರೂ ಅವತರಿಸಿದ್ದಾರೆ. ಇದೊಂದು ಕರ್ಮಧರ್ಮಸಂಯೋಗವೇ ಸರಿ; ಇರಲಿ.

**ಅದ್ವೈತಮತದ ಪೂರ್ವೇತಿಹಾಸ:**-- ಕಾಣ್ವಶಾಖೆಯ ಬ್ರಾಹ್ಮಣರು ಸಾರ್ವಭೌಮರಾಜರಾಗಿ ರಾಜ್ಯವನ್ನಾಳುತ್ತಿರುವಾಗ್ಗೆ (ಕ್ರಿಸ್ತಪೂರ್ವ ೭೩ರಿಂದ ಕ್ರಿ.ಪೂ. ೨೮ರ ವರೆಗೆ) ತೈತ್ತಿರೀಯ ಶಾಖೆಯ ಬ್ರಾಹ್ಮಣರಲ್ಲಿ [2]ಶ್ರೀ ಶಂಕರಾಚಾರ್ಯರೂ ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಶ್ರೀಸುರೇಶ್ವರಾಚಾರ್ಯರೂ ಅವತರಿಸಿ, ದಶೋಪನಿಷತ್ತುಗಳಿಗೂ, ಬ್ರಹ್ಮಸೂತ್ರಕ್ಕೂ ಹಾಗೂ ಭಗವದ್ಗೀತೆಗೂ ಭಾಷ್ಯವನ್ನೂ ವಾರ್ತಿಕವನ್ನೂ ಬರೆದು, ಈ ಪ್ರಸ್ಥಾನತ್ರಯದಲ್ಲಿ ಅದ್ವೈತಸಿದ್ಧಾಂತವು ನಿರೂಪಿಸಲ್ಪಟ್ಟಿರುತ್ತದೆಂದು ಪ್ರತಿಪಾದಿಸಿದರು. ಇದಲ್ಲದೆ ಶ್ರೀಶಂಕರಾಚಾರ್ಯರು ಭರತ

---

೧ ಶ್ರೀಮನ್ಮಧ್ವಾಚಾರ್ಯರೂ ಶ್ರೀಮಟ್ಟೀಕಾಚಾರ್ಯರೂ ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ೨ನೆಯ ಪರಿಶಿಷ್ಟದಲ್ಲಿ ಸಪ್ರಮಾಣವಾಗಿ ಸಿದ್ಧಮಾಡಿದ್ದೇವೆ. ಅಲ್ಲಿ ನೋಡಿರಿ.

೨ ಶ್ರೀಶಂಕರಾಚಾರ್ಯರು ವಿಕ್ರಮಸಂವತ್ ೧೪ರಲ್ಲಿ (ಎಂದರೆ ಕ್ರಿ. ಪೂ. ೪೨ರಲ್ಲಿ) ಅವತರಿಸಿದರೆಂದು ಶೃಂಗೇರಿ ಮಠದಲಿ ಲೇಖವಿದೆ.

ಖಂಡದ ನಾಲ್ಕೂ ದಿಕ್ಕುಗಳಲ್ಲಿ ಒಂದೊಂದು ಮಠವನ್ನು ಸ್ಥಾಪಿಸಿ, ತಮ್ಮ ನಾಲ್ಕು ಜನ ಶಿಷ್ಯರಲ್ಲಿ ಒಬ್ಬೊಬ್ಬರನ್ನು ಒಂದೊಂದು ಮಠಕ್ಕೆ ಆದ್ಯ ಜಗದ್ಗುರುಗಳನ್ನಾಗಿ ಮಾಡಿ,ಅಖಿಲ ಭರತಖಂಡದಲ್ಲಿ ಅದ್ವೈತ ಮತವನ್ನು ಪ್ರಸಾರ ಮಾಡಿದರು. ಎಂದರೆ ಭರತಖಂಡದ ದಕ್ಷಿಣ ದಿಕ್ಕಿಗೆ ಶೃಂಗೇರಿ ಮಠದಲ್ಲಿ ಶ್ರೀಸುರೇಶ್ವರಾಚಾರ್ಯರೂ, ಉತ್ತರ ದಿಕ್ಕಿಗೆ ಬದರಿಕಾಶ್ರಮದ ಮಠದಲ್ಲಿ ಶ್ರೀತೋಟಕಾಚಾರ್ಯರೂ ಪೂರ್ವದಿಕ್ಕಿಗೆ ವಡ್ಡಿ ಜಗನ್ನಾಥಪುರಿಯ ಮಠದಲ್ಲಿ ಶ್ರೀಹಸ್ತಾಮಲಕಾಚಾರ್ಯರೂ ಹಾಗೂ ಪಶ್ಚಿಮದಿಕ್ಕಿಗೆ ದ್ವಾರಕಾ ಮಠದಲ್ಲಿ ಶ್ರೀಪದ್ಮಪಾದಾಚಾರ್ಯರೂ ಆದ್ಯ ಜಗದ್ಗುರುಗಳಾಗಿ, ಭರತ ಖಂಡದ ನಾಲ್ಕೂ ದಿಕ್ಕುಗಳಲ್ಲಿ ಅದ್ವೈತ ಮತಪ್ರಚಾರಕಾರ್ಯವನ್ನು ಚೆನ್ನಾಗಿ ಮಾಡಿದರು.

**ವಿಶಿಷ್ಟಾದ್ವೈತ ಮತದ ಪೂರ್ವೇತಿಹಾಸ:—** ಶ್ರೀರಾಮಾನುಜಾಚಾರ್ಯರು ಕ್ರಿ. ಶ. ೧೦೧೭ ರಲ್ಲಿ ಅವತರಿಸಿ, ಬಾಲ್ಯದಲ್ಲಿಯೇ ಪೂರ್ಣ ವಿದ್ಯಾವಂತರಾದರು. ಮುಂದೆ ಕೆಲವು ಕಾಲದ ಮೇಲೆ ಇವರಿಗೆ ಸಂಸಾರದಲ್ಲಿ ವೈರಾಗ್ಯವುಂಟಾದುದರಿಂದ ಇವರು ಸನ್ಯಾಸಾಶ್ರಮವನ್ನು ಸ್ವೀಕರಿಸಿದರು. ತದನಂತರ ಬ್ರಹ್ಮಸೂತ್ರಗಳಿಗೂ ಭಗವದ್ಗೀತೆಗೂ ಭಾಷ್ಯವನ್ನು ಬರೆದು, ಇವುಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತವು ನಿರೂಪಿಸಲ್ಪಟ್ಟಿರುತ್ತದೆಂದು ಪ್ರತಿಪಾದಿಸಿದರು. ಇವರು ಬರೆದ ಬ್ರಹ್ಮಸೂತ್ರ ಭಾಷ್ಯಕ್ಕೆ **ಶ್ರೀಭಾಷ್ಯ**ವೆಂದು ಹೆಸರು. ಇದಲ್ಲದೆ ಇವರು ವೇದಾಂತಸಾರ, ವೇದಾಂತ ದೀಪ, ವೇದಾರ್ಥ ಸಂಗ್ರಹ ಪ್ರಭೃತಿ ಗ್ರಂಥಗಳನ್ನೂ ಬರೆದಿದ್ದಾರೆ. ಇವರು ಭರತಖಂಡದಲ್ಲಿ ಎಲ್ಲ ಕಡೆಗೂ ಸಂಚರಿಸಿ, ವಿಶಿಷ್ಟಾದ್ವೈತ ಮತವನ್ನು ಪ್ರಸಾರ ಮಾಡಿದರು. ಕರ್ನಾಟಕದೇಶದ ಹೊಯ್ಸಳ ಯಾದವವಂಶದ ರಾಜನಾದ ಬಿಟ್ಟಿದೇವನು ತನ್ನ ಜೈನಮತವನ್ನು ತ್ಯಾಗಮಾಡಿ, ಶ್ರೀರಾಮಾನುಜಾಚಾರ್ಯರಿಂದ ವಿಶಿಷ್ಟಾದ್ವೈತ ಮತದ ದೀಕ್ಷೆಯನ್ನು ತಗೆದುಕೊಂಡು,ವಿಷ್ಣುಭಕ್ತನಾಗಿ, "**ವಿಷ್ಣುವರ್ಧನ**" ಎಂಬ ನಾಮವನ್ನು ಧರಿಸಿದನು. ಈ ವಿಷ್ಣುವರ್ಧನ ರಾಜನಿಂದ ಆರಂಭ ಮಾಡಿಕೊಂಡು,ಮುಂದಿನ ಹೊಯ್ಸಳ ಯಾದವರಾಜರೆಲ್ಲರೂ ವಿಶಿಷ್ಟಾದ್ವೈತ ಮತಾನುಯಾಯಿಗಳೂ ವಿಷ್ಣುಭಕ್ತರೂ ಆಗಿದ್ದರೆಂಬುದನ್ನು ಬೇರೆ ಹೇಳಬೇಕಾದುದಿಲ್ಲ.

**ಶಿವಭಕ್ತಿ. ವಿಷ್ಣುಭಕ್ತಿಗಳ ಪೂರ್ವೇತಿಹಾಸ:**—ಶ್ರೀಮನ್ಮಧ್ವಾಚಾರ್ಯರು ಅವತರಿಸುವುದಕ್ಕಿಂತ ಪೂರ್ವದಲ್ಲಿ, ಕಾಲಾನುಕ್ರಮದಿಂದ ಶ್ರೀಶಂಕರಾಚಾರ್ಯರು, ಶ್ರೀರಾಮಾನುಜಾಚಾರ್ಯರು, ಶ್ರೀಬಸವೇಶ್ವರರು ಪ್ರಭೃತಿ ಭಿನ್ನಭಿನ್ನ ಮತೋದ್ಧಾರಕರು ಆಗಿಹೋದರು. ಈ ಮತೋದ್ಧಾರಕರ ಅನುಯಾಯಿಗಳಿಂದ, ಶಿವಭಕ್ತಿ, ವಿಷ್ಣುಭಕ್ತಿಗಳ ಉತ್ಕರ್ಷವೂ ಅಪಕರ್ಷವೂ ಹೇಗೆ ಹೇಗೆ ಉಂಟಾದುವೆಂಬುದನ್ನು ನೋಡುವಾ.

ಶ್ರೀಶಂಕರಾಚಾರ್ಯರ ಅದ್ವೈತಮತಕ್ಕೂ ಶಿವಭಕ್ತಿಗೂ ಲವಲೇಶವಾದರೂ ಸಂಬಂಧವಿಲ್ಲ. ಏಕೆಂದರೆ, ಅದ್ವೈತ ಸಿದ್ಧಾಂತದಲ್ಲಿ ನಿರಾಕಾರನೂ ನಿರ್ಗುಣನೂ ಆದ ಪರಮಾತ್ಮನೇ ಅಂತಿಮಧ್ಯೇಯವಾಗಿದ್ದಾನೆ. ಆದುದರಿಂದಲೇ ಸಾಕಾರರೂ ಸಗುಣರೂ ಆದ ಹರಿ, ಹರ ಪ್ರಭೃತಿ ದೇವತೆಗಳಲ್ಲಿ ಅದ್ವೈತ ಮತಾನುಯಾಯಿಗಳು ಭೇದವನ್ನು ಎಣಿಸುವುದಿಲ್ಲ. "ಈ ದೇವತೆಗಳೆಲ್ಲ ವ್ಯಾವಹಾರಿಕ ಸತ್ಯವೇ ಹೊರತು ಪಾರಮಾರ್ಥಿಕ ಸತ್ಯವಲ್ಲ." ಎಂಬುದು ಇವರ ಅದ್ವೈತಮತದ ಸಿದ್ಧಾಂತವಿದ್ದುದರಿಂದ ಇವರು "ಶಿವಸ್ಯ ಹೃದಯಂ ವಿಷ್ಣುರ್ವಿಷ್ಣೋಶ್ಚ ಹೃದಯಂ ಶಿವಃ" ಎಂದು ನುಡಿಯುತ್ತ ಹರಿಹರರನ್ನು ಸಮಾನ ಭಾವನೆಯಿಂದ ಭಜಿಸುತ್ತಾರೆ. ಅರ್ಥಾತ್ ಇವರು ಕೇವಲ ಶಿವಭಕ್ತರೂ ಅಲ್ಲ; ಕೇವಲ ವಿಷ್ಣುಭಕ್ತರೂ ಅಲ್ಲ. ಶಿವಭಕ್ತಿಯಾಗಲಿ, ವಿಷ್ಣುಭಕ್ತಿಯಾಗಲಿ ಇವರ ಅದ್ವೈತ ಸಿದ್ಧಾಂತಕ್ಕೆ ಏನೂ ಸಂಬಂಧವಿಲ್ಲ. ಆದರೂ ಈ ಅದ್ವೈತ ಮತಾನುಯಾಯಿಗಳ ಮನಸ್ಸಿನ ಒಲವು ವಿಷ್ಣುಭಕ್ತಿಗಿಂತಲೂ ಶಿವಭಕ್ತಿಯ ಕಡೆಗೆ ಹೆಚ್ಚಾಗಿರುತ್ತದೆ. ಇದರ ಕಾರಣವೇನು ? ಇದನ್ನು ಕಂಡು ಹಿಡಿಯುವಾ.

ದ್ವೈತಮತಾನುಯಾಯಿಗಳಾದ ನಾವು, ನಮ್ಮ ಗುರುಗಳಾದ ಶ್ರೀಮನ್ಮಧ್ವಾಚಾರ್ಯರು, ಶ್ರೀಮುಖ್ಯಪ್ರಾಣದೇವನ ಎಂದರೆ ಹನುಮಂತನ ಅವತಾರವೆಂದು ಹನುಮಂತನನ್ನು ಗುರುಭಾವನೆಯಿಂದ ಅತಏವ ಉತ್ಕಟವಾದ ಭಕ್ತಿಯಿಂದ ಭಜಿಸುತ್ತೇವೆ. ಅರ್ಥಾತ್ ಹನುಮಂತನೆಂದರೆ ಶ್ರೀಮನ್ಮಧ್ವಾಚಾರ್ಯರೆಂದು ನಮ್ಮ ಭಾವನೆಯು. ಆದುದರಿಂದಲೇ ಹನುಮಂತನ ವಿಷಯವಾಗಿ ಮಧ್ವಮತಾನುಯಾಯಿಗಳಲ್ಲಿದ್ದಷ್ಟು ಉತ್ಕಟವಾದ ಭಕ್ತಿಯು, ಅದ್ವೈತಮತಸ್ಥರಲ್ಲಿಯೂ ಇಲ್ಲ; ವಿಶಿಷ್ಟಾದ್ವೈತ

ಮತಸ್ಥರಲ್ಲಂತೂ ಇಲ್ಲವೇ[೧] ಇಲ್ಲ. ಇದೇ ಮೇರೆಗೆ ಅದ್ವೈತ ಮತಾನುಯಾಯಿಗಳು ತಮ್ಮ ಗುರುಗಳಾದ ಶ್ರೀ ಶಂಕರಾಚಾರ್ಯರು ಶಂಕರನ ಅವತಾರವೆಂದು ಶಿವನನ್ನು (ಅರ್ಥಾತ್ ಶಿವಲಿಂಗವನ್ನು) ಗುರುಭಾವನೆಯಿಂದ ಅತಏವ ಉತ್ಕಟವಾದ ಭಕ್ತಿಯಿಂದ ಭಜಿಸಲಾರಂಭಿಸಿದರು. ಸಾರಾಂಶ, ಶಿವನೆಂದರೆ ಶ್ರೀಶಂಕರಾಚಾರ್ಯರೆಂದು ಇವರ ಭಾವನೆಯು. ಆದುದರಿಂದಲೇ [೧]ಶಿವನ ವಿಷಯವಾಗಿ ಅದ್ವೈತ ಮತಾನುಯಾಯಿಗಳಲ್ಲಿದ್ದಷ್ಟು ಉತ್ಕಟವಾದ ಭಕ್ತಿಯು, ದ್ವೈತಮತಸ್ಥರಲ್ಲಿಯೂ ಇಲ್ಲ; ವಿಶಿಷ್ಟಾದ್ವೈತ ಮತಸ್ಥರಲ್ಲಂತೂ ಇಲ್ಲವೇ ಇಲ್ಲ.

ಇಷ್ಟೆಲ್ಲ ವಿವರಣೆಯ ಫಲಿತಾರ್ಥವೇನೆಂದರೆ, ಅದ್ವೈತ ಮತಾನುಯಾಯಿಗಳ ಮನಸ್ಸಿನ ಒಲವು ವಿಷ್ಣುಭಕ್ತಿಗಿಂತಲೂ ಶಿವಭಕ್ತಿಯ ಕಡೆಗೆ ಹೆಚ್ಚಾಗಿರುವುದಕ್ಕೆ ಗುರುಭಾವನೆಯೇ ಮೂಲಕಾರಣವೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಯಿತು. ಎಂದರೆ ಈ ಅದ್ವೈತಮತಾನುಯಾಯಿಗಳು ವಸ್ತುತಃ ಶೈವರಾಗಿರದಿದ್ದರೂ ತಮ್ಮ ಗುರುಗಳಾದ ಶ್ರೀಶಂಕರಾಚಾರ್ಯರು ಶಂಕರನ ಅವತಾರವೆಂದು ಗುರುಭಾವನೆಯಿಂದ ಶಿವನನ್ನು ಉತ್ಕಟವಾದ ಭಕ್ತಿಯಿಂದ ಭಜಿಸಲಾರಂಭಿಸಿದರು. ಅತಏವ ಅದ್ವೈತಮತಸ್ಥರಲ್ಲಿ ಶಿವಭಕ್ತಿಯು ಪ್ರಬಲವಾಯಿತು.

೧೦ನೆಯ ಶತಮಾನದ ಕೊನೆಯ ವರೆಗೂ ಅಖಿಲ ಭರತಖಂಡದಲ್ಲಿ ಶಿವಭಕ್ತಿಯೇ ಅತಿಶಯ ಪ್ರಬಲವಾಗಿತ್ತು; ವಿಷ್ಣುಭಕ್ತಿಯು ಅಡಗಿ ಹೋಗಿತ್ತು! ಮುಂದೆ ೧೧ನೆಯ ಶತಮಾನದಲ್ಲಿ ಶ್ರೀರಾಮಾನುಜಾಚಾರ್ಯರು ಅವತರಿಸಿ, ಶಿವಭಕ್ತಿಯ ಪ್ರಾಬಲ್ಯವನ್ನು ಕಡಿಮೆಮಾಡಿ, ವಿಷ್ಣುಭಕ್ತಿಯ ಪುನರುಜ್ಜೀವನವನ್ನು ಮಾಡಿದರು. ಆದರೇನು? ಇವರು ಕ್ರಿ. ವ.

೧ ಶ್ರೀಹನುಮಂತನ ವಿಷಯವಾಗಿ ಮಧ್ವಮತಸ್ಥರಲ್ಲಿ ಉತ್ಕಟವಾದ ಭಕ್ತಿಯಿದೆ; ಅದ್ವೈತ ಮತಸ್ಥರಲ್ಲಿ ಸಾಧಾರಣವಾದ ಭಕ್ತಿಯಿದೆ; ವಿಶಿಷ್ಟಾದ್ವೈತ ಮತಸ್ಥರಲ್ಲಿ ಭಕ್ತಿಯು ಇಲ್ಲವೇ ಇಲ್ಲ. ಎಂದರೆ ಇವರು ಶ್ರೀಹನುಮಂತದೇವರಿಗೆ ನಮಸ್ಕಾರವನ್ನು ಸಹ ಮಾಡುವುದಿಲ್ಲ. ಇದೇ ಮೇರೆಗೆ ಶಿವನ ವಿಷಯವಾಗಿ ಅದ್ವೈತ ಮತಸ್ಥರಲ್ಲಿ ಉತ್ಕಟವಾದ ಭಕ್ತಿಯಿದೆ; ದ್ವೈತ ಮತಸ್ಥರಲ್ಲಿ ಸಾಧಾರಣವಾದ ಭಕ್ತಿಯಿದೆ; ವಿಶಿಷ್ಟಾದ್ವೈತ ಮತಸ್ಥರಲ್ಲಿ ಭಕ್ತಿಯು ಇಲ್ಲವೇ ಇಲ್ಲ. ಎಂದರೆ ಇವರು ಶಿವನಿಗೆ (ಅರ್ಥಾತ್ ಶಿವಲಿಂಗಕ್ಕೆ) ನಮಸ್ಕಾರವನ್ನು ಸಹ ಮಾಡುವುದಿಲ್ಲ.

೧೧೩೭ರಲ್ಲಿ ನಿರ್ಯಾಣಹೊಂದಿದ ಕೂಡಲೆ ಶ್ರೀಬಸವೇಶ್ವರರು ಪ್ರಬಲರಾಗಿ, ಪುನಃ ವಿಷ್ಣುಭಕ್ತಿಯನ್ನು ಅಡಗಿಸಿ, ಎಲ್ಲ ಕಡೆಗೂ ಶಿವಭಕ್ತಿಯ ಪ್ರಸಾರವನ್ನು ಮಾಡಿದರು. ಈ ವೀರಶೈವ ಮತೋದ್ಧಾರಕರು ಕ್ರಿ. ವ. ೧೧೬೭ರಲ್ಲಿ ಬಯಲಾದರು. ಮುಂದೆ ಕ್ರಿ. ವ. ೧೧೯೯ರಲ್ಲಿಯೇ ಶ್ರೀಮನ್ಮಧ್ವಾಚಾರ್ಯರು ಅವತರಿಸಿದರು. ಅರ್ಥಾತ್ ಈ ಆಚಾರ್ಯರು ಅವತರಿಸಿದ ಕಾಲಕ್ಕೆ ಅಖಿಲ ಕರ್ನಾಟಕದಲ್ಲಿ ಕಿಂಬಹುನಾ ಭರತಖಂಡದಲ್ಲಿ ಎತ್ತ ನೋಡಿದತ್ತ ಶಿವಭಕ್ತಿಯೇ ದೃಷ್ಟಿಗೋಚರವಾಗುತ್ತಿತ್ತು. ಮತ್ತು ಅದ್ವೈತ, ವಿಶಿಷ್ಟಾದ್ವೈತ ಮತಗಳು ಅತ್ಯಂತ ಉತ್ಕರ್ಷಸ್ಥಿತಿಯಲ್ಲಿ ವಿರಾಜಿಸುತ್ತಿದ್ದವು. ಇಂಥ ಸಮಯದಲ್ಲಿ ಶ್ರೀಮದಾನಂದತೀರ್ಥರು ಅವತರಿಸಿ, ದ್ವೈತಮತವನ್ನೂ ವಿಷ್ಣುಭಕ್ತಿಯನ್ನೂ ಪುನರುಜ್ಜೀವನಗೊಳಿಸಿದರು.



# ೨ನೆಯ ಅಧ್ಯಾಯ



## ವಾಸುದೇವನ (ಎಂದರೆ ಶ್ರೀಮಧ್ವಾಚಾರ್ಯರ) ಜನ್ಮವೃತ್ತಾಂತ

ಹೊಯ್ಸಳಯಾದವ ೧ನೆಯ ನಾರಸಿಂಹ ರಾಜನು ದಕ್ಷಿಣ ಕರ್ನಾಟಕವನ್ನು (ದಕ್ಷಿಣ ಕನ್ನಡ ಜಿಲ್ಲೆಯನ್ನು ಎಂದರೆ ತುಳು ನಾಡನ್ನು ಸಹಿತ) ಆಳುತ್ತಿರುವಾಗ್ಗೆ (ಕ್ರಿ. ವ. ೧೧೪೧-೧೧೭೩) ಈ ರಾಜನಿಗೆ ಲಕ್ಷ್ಮೀಯ್ಯನೆಂಬ ಕಾಣ್ವಶಾಖೆಯ ಬ್ರಾಹ್ಮಣನು ಮುಖ್ಯ ಮಂತ್ರಿಯಾಗಿದ್ದನು. ಈ ಮಂತ್ರಿಯ ಸಾಹಾಯ್ಯದಿಂದ ರಾಜಾಶ್ರಯವನ್ನು ಪಡೆದು, ಶುಕ್ಲಯಜುರ್ವೇದಾಂತರ್ಗತ ಕಾಣ್ವ ಶಾಖಾಧ್ಯಾಯಿಗಳಾದ ತಪೋನಿಷ್ಠರಾದ ಮಧ್ಯಗೇಹಭಟ್ಟರೆಂಬ ಬ್ರಾಹ್ಮಣೋತ್ತಮರು ಕುಟುಂಬ ಸಹಿತವಾಗಿ ಬೇಲೂರು[1] ರಾಜಧಾನಿಯಿಂದ ಹೊರಟು, ತುಳುನಾಡಿಗೆ ಬಂದು, ಶಿವರೂಪ್ಯ ಗ್ರಾಮದಲ್ಲಿ ಮೊಟ್ಟಮೊದಲು ವಾಸಮಾಡಿದರು. ತದನಂತರ ಕೆಲವು ದಿವಸಗಳ ಮೇಲೆ ಈ ಶಿವರೂಪ್ಯ ಕ್ಷೇತ್ರದ ಆಗ್ನೇಯ ದಿಕ್ಕಿಗೆ ೭ ಮೈಲುಗಳ ಮೇಲೆ ಇರುವ **ಪಾಜಕ**ವೆಂಬ ಪವಿತ್ರವಾದ ಗ್ರಾಮಕ್ಕೆ ಹೋಗಿ ಅಲ್ಲಿ ಸ್ಥಿರವಾಗಿ ನೆಲೆಗೊಳಿಸಿದರು. ಈ ಮಧ್ಯಗೇಹಭಟ್ಟರು ಅದ್ವೈತ ಮತಾನುಯಾಯಿಗಳಾಗಿದ್ದು, ವೇದಶಾಸ್ತ್ರಗಳಲ್ಲಿ ಪಾರಂಗತರಾಗಿ ಗೃಹಸ್ಥಾಶ್ರಮದಲ್ಲಿದ್ದುಕೊಂಡು, ಯಜ್ಞಯಾಗಾದಿ ವೈದಿಕ ಕರ್ಮಗಳನ್ನು ಮಾಡುತ್ತ ಹಾಗೂ ದೇವ, ಋಷಿಗಳನ್ನೂ ಅತಿಥಿ ಅಭ್ಯಾಗತರನ್ನೂ ತೃಪ್ತಿಬಡಿಸುತ್ತ ಸುಖದಿಂದ ಕಾಲಕ್ರಮಣ ಮಾಡುತ್ತಿದ್ದರು.

**"ಪವಿತ್ರಂ ಪಾಜಕ ಕ್ಷೇತ್ರಂ ಕೋ ನ ಸೇವೇತ ಕೋವಿದಃ"**

ಎಂದು ಶ್ರೀಮದ್ವಾದಿರಾಜಯತೀಂದ್ರರು ತೀರ್ಥ ಪ್ರಬಂಧದಲ್ಲಿ ಹೇಳಿದಂತೆ

---

೧ "ಶ್ರೀಮನ್ಮಧ್ವಾಚಾರ್ಯರ ಪೂರ್ವಜರ ಸ್ಥಳ ನಿರ್ಣಯ" ಎಂಬ ೩ ನೆಯ ಪರಿಶಿಷ್ಟದಲ್ಲಿ ಹೊಯ್ಸಳ ೧ನೆಯ ನಾರಸಿಂಹ ರಾಜನು ಮಧ್ಯಗೇಹಭಟ್ಟ ಪ್ರಭೃತಿ ಅನೇಕ ಮಂದಿ ಬ್ರಾಹ್ಮಣರನ್ನು ಕುಟುಂಬ ಸಹಿತ ಬೇಲೂರು ರಾಜಧಾನಿಯಿಂದ ತಂದು ತುಳುನಾಡಿನಲ್ಲಿ ನಿಲ್ಲಿಸಿದನೆಂಬುದನ್ನು ಸಪ್ರಮಾಣವಾಗಿ ಹೇಳಿದ್ದೇವೆ- ಅಲ್ಲಿ ನೋಡಿರಿ.

ಶ್ರೀಮನ್ಮಧ್ವಾಚಾರ್ಯರು ಅವತರಿಸಿದ ಸ್ಥಳವಾದ ಈ ಪಾಜಕ ಗ್ರಾಮವು ಪರಮಪವಿತ್ರವಾದ ಕ್ಷೇತ್ರವಾಗಿರುತ್ತದೆ. ಪಾಜಕ ಕ್ಷೇತ್ರವಿರುವ ಈ ದೇಶದ ಐತಿಹ್ಯವನ್ನು ಇಲ್ಲಿಯ ಜನರು ಹೀಗೆ ಹೇಳುತ್ತಾರೆ:-"ಶ್ರೀ ವಿಷ್ಣುವಿನ ೬ನೆಯ ಅವತಾರನಾದ ಶ್ರೀ ಪರಶುರಾಮ ದೇವರು ಕ್ಷತ್ರಿಯರನ್ನು ಸಂಹರಿಸಿ, ಪಾದಾಕ್ರಾಂತ ಮಾಡಿದ ಸಮಸ್ತ ಭೂಮಂಡಲವನ್ನು ಕಶ್ಯಪರೇ ಮೊದಲಾದ ಋಷಿಗಳಿಗೆ ದಾನಮಾಡಿ, ಬ್ರಾಹ್ಮಣರಿಗೆ ದಾನಮಾಡಿದ ಆ ಭೂಮಿಯಲ್ಲಿ ತಾನು ವಾಸ ಮಾಡುವುದು ಅಯೋಗ್ಯವೆಂದು ತಿಳಿದು, ತನ್ನ ವಾಸಕ್ಕೆ ಯೋಗ್ಯವಾದ ಭೂಮಿಯನ್ನು ಸಹ್ಯಾದ್ರಿಯ ಅಡಿಯಿಂದ ಪಶ್ಚಿಮ ಸಮುದ್ರದ ವರೆಗೆ ನಿರ್ಮಿಸಿಕೊಂಡನು. ಆದುದರಿಂದ ಈ ಭೂಮಿಗೆ ಎಂದರೆ ಸಪ್ತ ಕೊಂಕಣ ಪ್ರದೇಶಕ್ಕೆ ಪರಶುರಾಮಕ್ಷೇತ್ರವೆಂದು ಹೆಸರುಂಟಾಯಿತು. ಈ ಪರಶುರಾಮ ಕ್ಷೇತ್ರದಲ್ಲಿಯೇ ಪಾಜಕ ಗ್ರಾಮವಿದೆ. ಶ್ರೀ ಪರಶುರಾಮನು ಈ ಗ್ರಾಮದ ಪೂರ್ವ ದಿಕ್ಕಿನಲ್ಲಿ **ಪರಶುತೀರ್ಥ**ವನ್ನೂ, ದಕ್ಷಿಣ ದಿಕ್ಕಿನಲ್ಲಿ **ಧನುಸ್ತೀರ್ಥ**ವನ್ನೂ, ಪಶ್ಚಿಮ ದಿಕ್ಕಿನಲ್ಲಿ **ಗದಾತೀರ್ಥ**ವನ್ನೂ, ಹಾಗೂ ಉತ್ತರ ದಿಕ್ಕಿನಲ್ಲಿ **ಬಾಣತೀರ್ಥ**ವನ್ನೂ ನಿರ್ಮಿಸಿದನು. ಈ ಪ್ರಕಾರ 'ಪಾಜ' (ಪ=ರಕ್ಷಕನು; ಅಜ=ಜನ್ಮರಹಿತನು.) ಎಂದರೆ ರಕ್ಷಕನೂ ಜನ್ಮವಿಲ್ಲದವನೂ ಆದ ಶ್ರೀ ಪರಶುರಾಮದೇವರಿಂದ 'ಕಂ' ಎಂದರೆ ನೀರು ಈ ಗ್ರಾಮಕ್ಕೆ ಉಂಟಾದುದರಿಂದ ಇದು ಪಾಜಕ ಕ್ಷೇತ್ರವೆಂದು ಪ್ರಖ್ಯಾತವಾಯಿತು."

ಇದೇ ಮೇರೆಗೆ ಮಧ್ಯಗೇಹ ಭಟ್ಟರು ಬೇಲೂರು ರಾಜಧಾನಿಯಿಂದ ತುಳುನಾಡಿಗೆ ಬಂದಕೂಡಲೇ ಮೊಟ್ಟಮೊದಲು ವಾಸಮಾಡಿದ ಶಿವರೂಪ್ಯ ಗ್ರಾಮದ ಇತಿಹಾಸವನ್ನೂ ಸ್ವಲ್ಪ ವಿವರಿಸಿ, ಮುಖ್ಯ ವಿಷಯದ ಕಡೆಗೆ ತೆರಳುವಾ.

ಈ ಶಿವರೂಪ್ಯ ಗ್ರಾಮವು, ಈಗಿನ ಉಡುಪಿ ಪಟ್ಟಣದಲ್ಲಿ ಸಮಾವೇಶವಾಗಿದೆ. ಎಂದರೆ ಶಿವರೂಪ್ಯ, ಬಡಗ ಬೆಟ್ಟು, ಮೂಡ ನಿಡಂಬೂರು ಈ ಮೂರು ಗ್ರಾಮಗಳು ಸೇರಿ, ಈಗಿನ ಉಡುಪಿ ಪಟ್ಟಣವಾಗಿದೆ. ಈ ಉಡುಪಿಯಲ್ಲಿ ಅನಂತೇಶ್ವರ, ಚಂದ್ರಮೌಳೀಶ್ವರ ಎಂಬೆರಡು ಶಿವಲಿಂಗಗಳ

ಗುಡಿಗಳು ಎಂದರೆ ಶಿವಾಲಯಗಳು ಯಾವ ಸ್ಥಳದಲ್ಲಿ ಇರುತ್ತವೆಯೋ, ಆ ಸ್ಥಳಕ್ಕೆ ಅಥವಾ ಆ ಊರಿಗೆ "ಶಿವರೂಪ್ಯ ಅಥವಾ ಶಿವಬೆಳ್ಳಿ" ಎಂಬ ಅನ್ವರ್ಥಕನಾಮವು ಪ್ರಾಪ್ತವಾಗಿದೆ. ಅರ್ಥಾತ್ ಈ ಗ್ರಾಮವು ಶೈವ ಕ್ಷೇತ್ರವೆಂದು ಪ್ರಖ್ಯಾತವಾಗಿದೆ. ಈ 'ಶಿವಬೆಳ್ಳಿ' ಎಂಬುದರ ಅಪಭ್ರಂಶವೇ '**ಶಿವಳ್ಳಿ**' ಎಂದಾಗಿದೆ.

೧ ಮಧ್ಯಗೇಹಭಟ್ಟರು ವೇದವತಿಯೆಂಬ ತಮ್ಮ ಧರ್ಮಪತ್ನಿಯಲ್ಲಿ ಇಬ್ಬರು ಗಂಡು ಮಕ್ಕಳನ್ನೂ ಒಬ್ಬ ಮಗಳನ್ನೂ ಪಡೆದಿದ್ದರು. ಆದರೆ ಪ್ರಾರಬ್ಧ ಕರ್ಮವು ಯಾರನ್ನೂ ಬಿಟ್ಟಿಲ್ಲ! ಈ ಮೂವರು ಮಕ್ಕಳಲ್ಲಿ ಗಂಡು ಮಕ್ಕಳೆರಡೂ ತೀರ ಚಿಕ್ಕ ವಯಸ್ಸಿನಲ್ಲಿಯೇ ಸತ್ತು ಹೋಗಿದ್ದವು. ಒಬ್ಬ ಮಗಳು ಮಾತ್ರ ಇದ್ದಳು.

ಪುತ್ರಸಂತಾನವಿಲ್ಲದಿದ್ದರೆ ಪುನ್ನಾಮಕ ನರಕದಲ್ಲಿ ಬಿದ್ದು, ಯಮಯಾತನೆಯನ್ನು ಭೋಗಿಸಬೇಕಾಗುತ್ತದೆಂದು ಪುರಾಣಗಳು ಹೇಳುತ್ತಿರುವುದರಿಂದ ಮಧ್ಯಗೇಹಭಟ್ಟರು ತಾವು ಪುತ್ರ ಲಾಭವನ್ನು ಪಡೆದುಕೊಳ್ಳಬೇಕೆಂದು ದೃಢ ಪ್ರತಿಜ್ಞೆಯನ್ನು ಮಾಡಿ, ಶಿವರೂಪ್ಯ ಕ್ಷೇತ್ರದಲ್ಲಿದ್ದ ಅನಂತೇಶ್ವರನನ್ನು ಕುರಿತು ಪತ್ನಿಸಮೇತರಾಗಿ ಪರಮ ಭಕ್ತಿಭಾವದಿಂದ ಹನ್ನೆರಡು ವರ್ಷಗಳ ವರೆಗೆ ಎಡೆಬಿಡದೆ ಸೇವಿಸಿದರು. ಈ ತಪಸ್ಸಿನಿಂದ ಈ ಪತಿಪತ್ನಿಯರ ದೇಹದಲ್ಲಿ ಉತ್ತಮವಾದ ಕಾಂತಿಯು ಕಂಗೊಳಿಸಿತು; ಇವರಿಬ್ಬರ ದೇಹವು ಪವಿತ್ರವಾಯಿತು. ಇಂತಹ ಪರಮ ಸಾಧ್ವಿಯಾದ ವೇದವತಿಯು ಗರ್ಭಾಧಾನಕ್ಕೆ ಯೋಗ್ಯವಾದ ಋತುಕಾಲದಲ್ಲಿ ಶ್ರೀ ಅನಂತೇಶ್ವರನ ಅನುಗ್ರಹದಿಂದ ಶ್ರೇಷ್ಠವಾದ ಗರ್ಭವನ್ನು ಧರಿಸಿದಳು. ಆ ಗರ್ಭವು ಶುಕ್ಲ ಪಕ್ಷದ ಚಂದ್ರಮಂಡಲದಂತೆ ಬೆಳೆದು, ನವಮಾಸಗಳು

---

೧ ಶ್ರೀ ವಿದ್ಯಾರಣ್ಯರು ತಾವು ಬರೆದ "ಸರ್ವದರ್ಶನ ಸಂಗ್ರಹ" ಎಂಬ ಗ್ರಂಥದಲ್ಲಿ ಈ ಮಧ್ಯಗೇಹಭಟ್ಟರ ಮಕ್ಕಳಾದ ಶ್ರೀ ಮನ್ಮಧ್ವಾಚಾರ್ಯರನ್ನೂ ಸಹ "ಮಧ್ಯಮಂದಿರ" ಎಂದರೆ "ಮಧ್ಯಗೇಹ" ಎಂಬ ಹೆಸರಿನಿಂದಲೇ ಹೀಗೆ ಸಂಬೋಧಿಸಿದ್ದಾರೆ:—"ಯಥೋಕ್ತಂ ಮಧ್ಯಮನ್ದಿರೇಣ ಮಹಾಭಾರತ ತಾತ್ಪರ್ಯನಿರ್ಣಯೇ।"—ಅತಏವ "ಮಧ್ಯಗೇಹ" ಎಂಬುದು ಇವರ ಮನೆತನದ ಅಡ್ಡ ಹೆಸರೆಂಬುದು ಸ್ಪಷ್ಟವಾಯಿತು.

ತುಂಬಿದ ಬಳಿಕ ಆ ಸಾಧ್ವಿಯು ೧೧೩೮ನೆಯ[೧] ಶಕವರ್ಷದ ಸಿದ್ಧಾರ್ಥಿ ಸಂವತ್ಸರದಲ್ಲಿ ಶುಭ ಮುಹೂರ್ತದಲ್ಲಿ ಸರ್ವ ಸುಲಕ್ಷಣ ಸಂಪನ್ನನಾದಂಥ ಹಾಗೂ ಪರಮ ಸುಂದರನಾದಂಥ ಸುಪುತ್ರನನ್ನು ಪಾಜಕ ಕ್ಷೇತ್ರದಲ್ಲಿ ಹಡೆದಳು. ಈ ಸುವಾರ್ತೆಯನ್ನು ಕೇಳಿದಕೂಡಲೇ ಎಲ್ಲರಿಗೂ ಬಹಳ ಸಂತೋಷವಾಯಿತು. ಈ ಜನನ ಕಾಲದಲ್ಲಿ ಮಧ್ಯಗೇಹ ಭಟ್ಟರು ಮನೆಯಲ್ಲಿರಲಿಲ್ಲ. ಈ ಮಹನೀಯರು ಶ್ರೀಮದನಂತೇಶ್ವರನನ್ನು ಸೇವಿಸುವುದಕ್ಕೋಸ್ಕರ ಶಿವರೂಪ್ಯ ಕ್ಷೇತ್ರಕ್ಕೆ ಹೋಗಿದ್ದರು. ಅಲ್ಲಿಂದ ಅವರು ತಿರುಗಿ ತಮ್ಮ ಮನೆಗೆ ಬರುತ್ತಿರುವಾಗ್ಗೆ, ಪುತ್ರೋತ್ಪತ್ತಿಯ ಉತ್ಸವದಲ್ಲಿ ಉಂಟಾದ ದೇವದುಂದುಭಿಯ ಧ್ವನಿಯನ್ನು ಮೊದಲು ಕೇಳಿದರು. ಆ ಬಳಿಕ ಮನೆಯ ಸಮೀಪಕ್ಕೆ ಬರುತ್ತಿರಲು, ತನಗೆ ಸುಪುತ್ರನು ಹುಟ್ಟಿದನೆಂಬ ಶುಭವಾರ್ತೆಯನ್ನು ಜನರಿಂದ ಕೇಳಿ, ಮಧ್ಯಗೇಹಭಟ್ಟರು ಬಹು ಸಂತೋಷ ಭರಿತರಾಗಿ, ಶ್ರೀ ಅನಂತೇಶ್ವರ ದೇವರ ಕೃಪೆಯಿಂದ ತಮಗೆ ಈ ಪುತ್ರ ಲಾಭವು ಪ್ರಾಪ್ತವಾಯಿತೆಂದು ನುಡಿದು, ಆ ಪರಮಾತ್ಮನನ್ನು ಅನನ್ಯ ಭಾವದಿಂದ ಸ್ತುತಿಸುತ್ತ ಮನೆಗೆ ಬಂದರು. ಮನೆಯೊಳಗೆ ಹೋಗಿ, ಆ ಪುತ್ರನ ಸೌಂದರ್ಯವನ್ನೂ ತೇಜೋವಿಲಾಸವನ್ನೂ ನೋಡಿದಕೂಡಲೇ ಮಧ್ಯಗೇಹ ಭಟ್ಟರ ನೇತ್ರಗಳಿಂದ ಆನಂದಾಶ್ರುಗಳು ಉದುರಿದವು!

ಮಧ್ಯಗೇಹಭಟ್ಟರು ಪರಮ ಪುಣ್ಯಶ್ಲೋಕರಾದುದರಿಂದ ಪೂರ್ವಾಲಯ ಬ್ರಾಹ್ಮಣನೊಬ್ಬನು ಎಂದರೆ ಮೂಡಣ ಬೀಡು ಬಲ್ಲಾಳನು ಸತ್ಪಾತ್ರರಾದ ಈ ಮಹಾನುಭಾವರಿಗೆ ಈ ಸಮಯದಲ್ಲಿ ಗೋದಾನವನ್ನು ಮಾಡಿದರೆ ಪರಮ ಪುಣ್ಯವೆಂದು ತಿಳಿದು, ಮಧ್ಯಗೇಹಭಟ್ಟರ ಈ ಶಿಶುವಿಗೆ ಹಾಲಿಗೋಸ್ಕರ ಹಿಂಡುವ ದಿವ್ಯವಾದ ಒಂದು ಆಕಳನ್ನು ಕೊಟ್ಟನು. ಜನನಾಶೌಚವು ತೀರಿದಬಳಿಕ ಮಂಗಳಸ್ನಾನ, ಪುಣ್ಯಾಹವಾಚನಾದಿಗಳಿಂದ ಶುಚಿಭೂತರಾಗಿ ಮಧ್ಯಗೇಹಭಟ್ಟರು ಸುಮುಹೂರ್ತದಲ್ಲಿ ಈ ಪುತ್ರನಿಗೆ **'ವಾಸುದೇವ'** ಎಂಬ ಹೆಸರನ್ನಿಟ್ಟರು. ಈ ನಾಮವು ಅರ್ಥಪೂರ್ಣ

೧ "ಶ್ರೀ ಮನ್ಮಧ್ವಾಚಾರ್ಯರ ಕಾಲನಿರ್ಣಯ" ಎಂಬ ೧ನೆಯ ಪರಿಶಿಷ್ಟವನ್ನು ನೋಡಿರಿ. ಸುಮಧ್ವವಿಜಯದಲ್ಲಿ ಶ್ರೀಮದಾಚಾರ್ಯರು ಅವತರಿಸಿದ ಶಕವರ್ಷ, ಸಂವತ್ಸರ, ಮಾಸ, ಪಕ್ಷ, ತಿಥಿ, ವಾರ ಯಾವುದನ್ನೂ ಹೇಳಿರುವುದಿಲ್ಲ.

ವಾದದ್ದಾಗಿದೆ. ಅದು ಹೇಗೆಂದರೆ:— ವಾರ್ಥಂ-ಜ್ಞಾನಕ್ಕಾಗಿ ಅವತರಿಸಿದ ಅಸುದೇವಃ=ಮುಖ್ಯ ಪ್ರಾಣನು ವಾಸುದೇವನು; ಅಥವಾ ವಾಸುದೇವ ಸ್ವಾಯಂ ವಾಸುದೇವಃ=ಶ್ರೀಹರಿಯ ಭಕ್ತನಾದುದರಿಂದ ' ವಾಸುದೇವ ' ಎಂಬ ನಾಮವು ಪ್ರಾಪ್ತವಾಯಿತೆಂದು ಇತ್ಯರ್ಥ.

ಶ್ರೀ ಅನಂತೇಶ್ವರ ದೇವರ ವರಪ್ರಸಾದದಿಂದ ಹುಟ್ಟಿದ ಈ ಪುತ್ರನಿಗೆ ಆಯುರಾರೋಗ್ಯಾಭಿವೃದ್ಧಿಯುಂಟಾಗುವುದಕ್ಕೋಸ್ಕರ ಆ ಮಹಾ ಸ್ವಾಮಿಯ ಪಾದಾರವಿಂದದಲ್ಲಿ ಈತನನ್ನು ಕಾಣಿಕೆಯಾಗಿ ಸಮರ್ಪಿಸಿ, ಆ ಸ್ವಾಮಿಯ ಅನುಗ್ರಹವನ್ನು ಪಡೆಯಬೇಕೆಂದು, ಮಧ್ಯಗೇಹಭಟ್ಟರು ಸಹಕುಟುಂಬ ಸಹಪರಿವಾರದೊಡನೆ ಪಾಜಕ ಗ್ರಾಮದಿಂದ ಶಿವರೂಪ್ಯ ಕ್ಷೇತ್ರಕ್ಕೆ ತೆರಳಿದರು. ಆ ಪ್ರಕಾರ ಅಲ್ಲಿಗೆ ಹೋಗಿ, ಆ ದೇವಾಲಯದಲ್ಲಿ ಶ್ರೀ ಅನಂತೇಶ್ವರ ದೇವರ ದರ್ಶನವನ್ನು ಮಾಡಿಕೊಂಡು, ಧೂಪ, ದೀಪ,-ನೈವೇದ್ಯಗಳಿಂದ ದೇವರನ್ನಾರಾಧಿಸಿ, ಈ ಬಾಲಕನಿಗೆ ಸೌಖ್ಯವಾಗಲೆಂದು ಆ ಪರಮಾತ್ಮನನ್ನು ಅನನ್ಯಭಾವದಿಂದ ಪ್ರಾರ್ಥಿಸಿ, ಈ ಪುತ್ರಶ್ರೇಷ್ಠನನ್ನು ಆ ದೇವರ ಸನ್ನಿಧಿಯಲ್ಲಿ ಕೈಗಾಣಿಕೆಯಾಗಿ ಸಮರ್ಪಿಸಿದರು. ತದನಂತರ ಭಟ್ಟರು ಶ್ರೀಮದನಂತೇಶ್ವರನನ್ನು ನಮಸ್ಕರಿಸಿ, ಈ ಬಾಲಕನಿಗೆ ಸುಖ ಸಂಪತ್ತುಗಳು ಪ್ರಾಪ್ತವಾಗಲೆಂದು ಆ ಪರಮೇಶ್ವರನನ್ನು ಪ್ರಾರ್ಥಿಸಿ, ಕೂಸನ್ನು ಕರೆದುಕೊಂಡು, ಸಹಕುಟುಂಬ ಸಹಪರಿವಾರದೊಡನೆ ಮಧ್ಯ ರಾತ್ರಿ ಸಮಯದಲ್ಲಿ ತಮ್ಮ ಪಾಜಕ ಗ್ರಾಮಕ್ಕೆ ಬಂದರು.

---

# ೩ನೆಯ ಅಧ್ಯಾಯ

## ವಾಸುದೇವನ ಬಾಲಲೀಲೆಗಳು.

ಪರಮ ಸುಂದರನಾದ ವಾಸುದೇವನು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಬೆಳೆಯಲಾರಂಭಿಸಿದನು. ದಿವ್ಯ ವಿಲಾಸಕಾಂತಿಯಿಂದ ಶೋಭಿಸುವ ಈ ಬಾಲಕನನ್ನು ಎಲ್ಲ ಜನರೂ ಎತ್ತಿ, ಬಿಗಿದಪ್ಪಿ, ಮುದ್ದಾಡಿ, ಪ್ರೇಮಾಶ್ರುಗಳನ್ನು ಸುರಿಸಿ, ಮಧ್ಯಗೇಹಭಟ್ಟರ ಭಾಗ್ಯವನ್ನು ಹೊಗಳಲಾರಂಭಿಸಿದರು. ತಾಯಿಯಂತೂ ಈ ಮುದ್ದು ಮಗನನ್ನು ಒಂದು ಅರಗಳಿಗೆಯಾದರೂ ಬಿಟ್ಟಿರುತ್ತಿರಲಿಲ್ಲ. ಒಂದಾನೊಂದು ದಿವಸ ತಾಯಿಯಾದ ವೇದವತಿಯು ನೆರಮನೆಯ ಗೃಹಕೃತ್ಯಕ್ಕೆ ನೆರವಾಗುವುದಕ್ಕೋಸ್ಕರ ಹೋಗಬೇಕಾದ ಸಂದರ್ಭದಲ್ಲಿ ಈ ಪ್ರಿಯ ಬಾಲಕನನ್ನು ತನ್ನ ಮಗಳ ಕೈಯಲ್ಲಿ ಕೊಟ್ಟು, "ನಾನು ಬರುವವರೆಗೆ ಈ ಕೂಸನ್ನು ಆಡಿಸುತ್ತಿರು." ಎಂದು ಆ ಮಗಳಿಗೆ ಹೇಳಿ, ಮನೆಯಿಂದ ಹೊರಟುಹೋದಳು. ಮುಂದೆ ತುಸು ಹೊತ್ತಿನಲ್ಲಿಯೇ ಕೂಸು ಅಳುವುದಕ್ಕೆ ಆರಂಭಿಸಿತು. ಆಗ ಆ ಹುಡುಗಿಯು ಈ ಬಾಲಕನನ್ನು ಪರಿಪರಿಯಿಂದ ರಮಿಸಿ, ಸಮಾಧಾನ ಮಾಡುವುದಕ್ಕೆ ಪ್ರಯತ್ನ ಮಾಡಿ ನೋಡಿದಳು. ಎಷ್ಟು ರೀತಿಯಿಂದ ಸಮಾಧಾನ ಮಾಡುವುದಕ್ಕೆ ಹೋದರೂ ಹಟಮಾರಿತನದಿಂದ ಹೆಚ್ಚು ಹೆಚ್ಚು ಅಳಲಾರಂಭಿಸಿದನು. ಕೊನೆಗೆ ಏನಾದರೂ ಆಗಲೆಂದು ಚೆನ್ನಾಗಿ ಬೇಯಿಸಿಟ್ಟಿದ್ದ ಹುರುಳಿಯ ಉಸುಳಿಯನ್ನು ಅವನಿಗೆ ತಿನ್ನಿಸಿದಳು. ದೊಡ್ಡ ಮನುಷ್ಯರಿಗೂ ಕೂಡ ತಿನ್ನಲು ಸಾಧ್ಯವಾಗದಷ್ಟು ಒಂದೆರಡು ಸೇರು ಹುರುಳಿಯ ಉಸುಳಿಯನ್ನು ತಿಂದು, ತೃಪ್ತಿಯನ್ನು ಹೊಂದಿ, ಸಂತೋಷದಿಂದ ಆಡಲಾರಂಭಿಸಿದನು. ಅಷ್ಟರಲ್ಲಿ ಮಧ್ಯಗೇಹಭಟ್ಟರ ಹೆಂಡತಿಯು – "ಬಾಲಕನು ಮೊಲೆಯುಣ್ಣಲು ಬಯಸಿ, ಬಹಳ ಅಳುತ್ತಿರಬಹುದು; ಎರಡನೆಯವರ ಮನೆತನದ ಕೆಲಸದಲ್ಲಿಯೇ ತೊಡಗಿ, ಕೂಸನ್ನು ದಣಿಸಿದ ನಿರ್ದಯಳಾದ ನನಗೆ ಧಿಕ್ಕಾರ

ವಿರಲಿ." ಎಂದು ನುಡಿಯುತ್ತಾ, ಹಾಗೂ ವ್ಯಸನ ಪಡುತ್ತಾ ಮನೆಗೆ ಬಂದು, ಆಗ ಹೊಟ್ಟೆ ತುಂಬಿ ಸುಖವಾಗಿ ನಗುತ್ತ ಸಂತೋಷದಿಂದ ಆಡುತ್ತಿರುವ ಮಗನನ್ನು ಕಂಡು ಆಶ್ಚರ್ಯಚಕಿತಳಾದಳು! ಕೂಡಲೇ ಆ ತಾಯಿಯು ಮಗಳನ್ನು ಕೇಳಿ, ತಾನು ಮನೆಯಿಂದ ಹೊರಗೆ ಹೋದ ಮೇಲೆ ನಡೆದ ಎಲ್ಲ ವೃತ್ತಾಂತವನ್ನೂ ತಿಳಿದು, ಪ್ರಾಯದ ಗಂಡಸರೂ ಸಹ ಜೀರ್ಣಿಸಲಾರದಷ್ಟು ಹುರುಳಿಯನ್ನು ಈ ಸಣ್ಣ ಹುಡುಗನು ತಿಂದನಲ್ಲಾ! ಎಂದು ಚಿಂತಿಸಿ, ಮಗಳನ್ನು ಬಹಳವಾಗಿ ಹೆದರಿಸಿದಳು; ತಾನೂ ಕೂಡ ಹೆದರಿದಳು. ಮತ್ತು ಮನಸ್ಸಿನಲ್ಲಿ ಬಹು ಸಂತಾಪಗೊಂಡಳು. ಕೂಸಿಗೆ ಏನು ಅಪಾಯವಾಗುವದೋ! ತನ್ನಿಂದಲೇ ತಾನು ಈ ಕಷ್ಟವನ್ನು ಒದಗಿಸಿಕೊಂಡಂತಾಯಿತಲ್ಲಾ! ಎಂದು ಮನಸ್ಸಿನಲ್ಲಿ ಬಹಳ ನೊಂದುಕೊಂಡಳು. ಆದರೆ ಈ ಬಾಲಕನಿಗೆ ಅದರಿಂದೇನೂ ಅಪಾಯವಾಗದೆ ಈತನು ಆರೋಗ್ಯವಂತನಾಗಿಯೇ ಇದ್ದುದರಿಂದ ಈ ವಾಸುದೇವನು ಲೋಕೋತ್ತರನಾದ ಬಾಲಕನೆಂದೂ ಇವನ ಜಠರಾಗ್ನಿಯು ಅತ್ಯಂತ ಬಲಿಷ್ಠವಾದದ್ದೆಂದೂ ತಿಳಿದು, ತಾಯಿಯು ಬಹಳ ಬೆರಗಾದಳು!

ಈ ವಾಸುದೇವನು ಮೊದಲು ವಯಸ್ಸಿಗೆ ತಕ್ಕಂತೆ ಅಂಬೆಗಾಲೂರಿ ನಡೆಯಲಾರಂಭಿಸಿದನು. ಮುಂದೆ ಕೆಲವು ದಿನಗಳ ಮೇಲೆ ತಾನೇ ಎದ್ದು ನಿಲ್ಲಲಾರಂಭಿಸಿದನು. ಆ ಬಳಿಕ ಅಭ್ಯಾಸ ಬಲದಿಂದ ಬರಬರುತ್ತ ಎಲ್ಲ ಕಡೆಯಲ್ಲೂ ತಿರುಗಾಡಹತ್ತಿದನು. ಒಂದಾನೊಂದು ದಿವಸ ಮುಂಜಾನೆ ಈ ಬಾಲಕನು ತನ್ನ ಮನೆಯ ದನಗಳು ಮೇಯುವುದಕ್ಕೆ ಅರಣ್ಯಕ್ಕೆ ಹೊರಟಿರುವಾಗ ತನ್ನ ಪ್ರೀತಿಗೆ ಪಾತ್ರವಾದ ಒಂದು ಹೋರಿಯ ಬಾಲವನ್ನು ಹಿಡಿದುಕೊಂಡು, ತನ್ನ ಮನೆಯ ಜನರಿಗೆ ಹೇಳದೆ ಕೇಳದೆ ಅಡವಿಗೆ ಹೊರಟು ಹೋದನು. ಮುಂದೆ ಕೆಲ ಹೊತ್ತಿನ ಮೇಲೆ ತಾಯಿತಂದೆಗಳು ಮನೆಯಲ್ಲಿ ಮಗನನ್ನು ಹುಡುಕುತ್ತಾರೆ! ಇಲ್ಲವೇ ಇಲ್ಲ!! ಬಾಲಕನು ಎಲ್ಲಿಯಾದರೂ ಆಟವನ್ನಾಡುತ್ತಿರುವನೋ? ಅಥವಾ ಇತರರ ಮನೆಗಳಿಗೆ ಹೋಗಿರುವನೋ? ಇಲ್ಲವೆ ಬಾವಿಯಲ್ಲಿ ಬಿದ್ದನೋ? ಎಂದು ನಾನಾ ರೀತಿಯಿಂದ ಆಲೋಚಿಸಿ ನಾಲ್ಕೂ ಕಡೆಯಲ್ಲಿ ತಿರುಗಿ ತಿರುಗಿ ಹುಡುಕಿ ಮಗನನ್ನು ಕಾಣದೆ, ಮನಸ್ಸಿನಲ್ಲಿ ಸಂತಾಪವನ್ನು ಹೊಂದಿದರು. ಅಷ್ಟರಲ್ಲಿ ದನ

ಕಾಯುವವನೊಬ್ಬನು, ಬಾಲಕನನ್ನು ಹುಡುಕುವ ಜನರನ್ನು ಕಂಡು, ಆ ಬ್ರಾಹ್ಮಣನಿಗೆ ಹೀಗೆ ಹೇಳಿದನು:— " ನಾನು ಈ ದಿವಸ ಮುಂಜಾನೆ ಅಡವಿಯಲ್ಲಿ ಒಂದು ವರ್ಷದ ಹೋರಿಯು ಬಾಲನನ್ನು ಹಿಡಿದುಕೊಂಡು, ಆ ಹೋರಿಯೊಡನೆ ತಿರುಗಾಡುತ್ತಿರುವ ಬ್ರಾಹ್ಮಣ ಬಾಲಕನನ್ನು ನೋಡಿದ್ದೇನೆ." ಈ ಮಾತನ್ನು ಕೇಳಿ ಅಲ್ಲಿಗೆ ಹೋಗಬೇಕೆನ್ನುವಷ್ಟರಲ್ಲಿ ಮೂರೂ ಸಂಜೆಗೆ ಆ ಹೋರಿ ಕರವ ಬಾಲನನ್ನು ಹಿಡಿದುಕೊಂಡು ವಾಸುದೇವನು ಮನೆಗೆ ಬಂದನು. ಅವನನ್ನು ನೋಡಿ, ಬಡವನಿಗೆ ಚಿಂತಾಮಣಿ ರತ್ನವು ದೊರೆತಂತೆ ಅಥವಾ ಮುಮುಕ್ಷುವಿಗೆ ಶ್ರೀಮನ್ನಾರಾಯಣನ ಸಾಕ್ಷಾತ್ಕಾರವಾದಂತೆ ಸಕಲ ಬಂಧುಗಳಿಗೂ ಪರಮಾನಂದವಾಯಿತು.

ಮುಂದೆ ಕೆಲವು ದಿವಸಗಳು ಕಳೆದಬಳಿಕ ಮಧ್ಯಗೇಹಭಟ್ಟರು ತಮ್ಮ ಬಂಧುಗಳ ಮನೆಯಲ್ಲಿ ಜರುಗುವ ವಿವಾಹ ಮಹೋತ್ಸವಕ್ಕಾಗಿ ಆ ಬಂಧುಗಳ ಪ್ರೀತ್ಯರ್ಥವಾಗಿ ತಮ್ಮ ಸತಿಸುತರೊಡನೆ **ನಡುವೈರಿ**ಯೆಂಬ ಗ್ರಾಮಕ್ಕೆ ಹೊರಟುಹೋದರು. ಆ ಮದುವೆಯ ಮನೆಯಲ್ಲಿ ಬಂಧುಬಳಗದವರ ಕಾರ್ಯಕಲಾಪದ ಗಲಭೆಯು ನಡೆದಿರಲು, ಆ ಗದ್ದಲದಲ್ಲಿ ವಾಸುದೇವನು ತಾಯಿಗೆ ತಿಳಿಯದಂತೆ ಆ ಮದುವೆಯ ಮನೆಯಿಂದ ಹೊರಟುಹೋದನು. ಈ ಬಾಲಕನು **'ಕುಡುವೂರು ಕಾನ'** ಎಂಬ ಕ್ಷೇತ್ರಕ್ಕೆ ಹೊರಟಿರಲು, ಮಾರ್ಗದಲ್ಲಿ ದಾರಿಗರು ಈತನನ್ನು ಕುರಿತು:— "ತಮ್ಮಾ! ಮುದ್ದು ಮಗನೇ! ಎಲ್ಲಿಗೆ ಹೊರಟಿರುತ್ತೀ? ನೀನು ಸಣ್ಣವನಿದ್ದುದರಿಂದ ಸ್ವಜನರನ್ನು ಬಿಟ್ಟುಕೊಟ್ಟು ಹೋಗುವುದು ಈ ಚಿಕ್ಕ ವಯಸ್ಸಿನಲ್ಲಿ ನಿನಗೆ ಯೋಗ್ಯವಲ್ಲ." ಎಂದು ಕೇಳಿದೊಡನೆ ಆ ಸಮರ್ಥನಾದ ವಾಸುದೇವನು ನಿರ್ಭಯದಿಂದ ಮುಗುಳುನಗೆನಕ್ಕು, ಆ ನಸು ನಗೆಯನ್ನೇ ಉತ್ತರವನ್ನಾಗಿ ಮಾಡಿದನು. ಎಂದರೆ ಏನೂ ಉತ್ತರ ಕೊಡದೆ ನಿರ್ಭೀತನಾಗಿ ನಕ್ಕುಬಿಟ್ಟನು. ವಾಸುದೇವನು ನಗುತ್ತ ಹಾಗೆಯೇ ಮುಂದಕ್ಕೆ ಸಾಗಿ, ಕುಡುವೂರು ಕಾನವೆಂಬ ಕ್ಷೇತ್ರದಲ್ಲಿರುವ ಈಗ ಶಂಕರನಾರಾಯಣನ ದೇವಾಲಯವೆಂದು ಪ್ರಸಿದ್ಧವಾದ ಗುಡಿಗೆ ಬಂದು, ಅಲ್ಲಿ ಶ್ರೀ ನಾರಾಯಣನಿಗೆ ನಮಸ್ಕರಿಸಿ, ಆ ಮೇಲೆ ಅಲ್ಲಿಂದ ಬೇಗನೆ ಹೊರಟು, **ತಾಳಿಕುಡೆ**ಯೆಂದು ಪ್ರಸಿದ್ಧವಾದ (ಈಗ ಬನ್ನಿಂಜೆಯೆಂದು ಕರೆಯಲ್ಪಡುವ) ಸ್ಥಳದಲ್ಲಿರುವ ದೇವಾಲಯಕ್ಕೆ

ಬಂದು, ಅಲ್ಲಿರುವ ಶ್ರೀ ನಾರಾಯಣನಿಗೂ ವಂದಿಸಿದನು. ಅಲ್ಲಿಂದ ಹೊರಟು ಶಿವರೂಪ್ಯ ಕ್ಷೇತ್ರಕ್ಕೆ ಬಂದು ಶ್ರೀ ಅನಂತೇಶ್ವರನಿಗೆ ನಮಸ್ಕರಿಸಿದನು.

ಇತ್ತ ಮಗನ ಮೇಲೆ ಅತ್ಯಂತ ಮಮತೆಯುಳ್ಳ ಬ್ರಾಹ್ಮಣ ಶ್ರೇಷ್ಠನಾದ ಆ ಮಧ್ಯಗೇಹಭಟ್ಟನು ಮಗನನ್ನು ಕಾಣದೆ ಭಯಗ್ರಸ್ತನಾಗಿ ಹುಡುಕಲಾರಂಭಿಸಿದನು. ಆ ಮದುವೆಯ ಮನೆಯಿಂದ ಬೇಗನೆ ಹೊರಟು, ಮಗನು ಹೋಗಿದ್ದ ದಾರಿಯನ್ನು ಹೆಜ್ಜೆಯ ಗುರುತಿನಿಂದ ಕಂಡುಹಿಡಿದು ಹಿಂಬಾಲಿಸಿ ನಡೆದು, ದಾರಿಯಲ್ಲಿ ಸಿಕ್ಕ ಪ್ರತಿಯೊಬ್ಬ ಮನುಷ್ಯನನ್ನು ಕುರಿತು— "ನಮ್ಮ ಬಾಲಕನು ನಿಮಗೆ ಭೆಟ್ಟಿಯಾಗಿದ್ದನೇ?" ಎಂದು ಆತುರದಿಂದ ಮೇಲಿಂದಮೇಲೆ ಕೇಳಿದನು. ಭ್ರಮರವು, ಗಾಳಿಯ ಸಾಹಾಯ್ಯದಿಂದ ಇಂತಹ ಸ್ಥಳದಲ್ಲಿಯೇ ಕಮಲವಿರುತ್ತದೆಂದು ತಿಳಿದು, ಆ ಅರಳಿದ ಕಮಲವನ್ನು ತಲಪುವಂತೆ, ದಾರಿಗರು ಪ್ರತಿ ಕ್ಷಣದಲ್ಲಿ ಸೂಚಿಸಿದ ಮಾರ್ಗದಿಂದ ಹೊರಟು ಯಾವಾಗ ಮಗನನ್ನು ನೋಡಿ ಸಂತೋಷ ಪಟ್ಟೇನೆಂಬ ಲವಲವಿಕೆಯಿಂದ ಆ ಬ್ರಾಹ್ಮಣ ಶ್ರೇಷ್ಠನು ಬೇಗನೆ ಶಿವರೂಪ್ಯ ಕ್ಷೇತ್ರಕ್ಕೆ ಓಡಿ ಬಂದು, ಮನೋಹರವಾದ ಮುಗುಳುನಗೆಯಿಂದ ಕೂಡಿದ ಮಗನ ಮುಖವನ್ನು ನೋಡಿದನು. ನೋಡಿದಾಕ್ಷಣವೇ ಮಧ್ಯಗೇಹ ಭಟ್ಟರು ಆ ಮುದ್ದು ಮಗನನ್ನು ಎತ್ತಿಕೊಂಡು, ಬಿಗಿದಪ್ಪಿ, ಮೃದು ವಚನಗಳಿಂದ ಲಾಲಿಸಿ,-"ಅಪ್ಪಾ! ಮಗನೇ! ಸತ್ಯವಾಗಿ ಹೇಳು, ನೀನು ಚಿಕ್ಕವನಾಗಿದ್ದುದರಿಂದ ನಿನ್ನನ್ನು ಇಷ್ಟು ದೂರ ಯಾರು ಕರೆದುಕೊಂಡು ಬಂದರು? ಮುದ್ದು ಮಗನೇ ಅತಿ ದೂರವಾದ ಈ ದಾರಿಯಲ್ಲಿ ನಿನಗೆ ಯಾರು ಸಹಾಯಕರಾಗಿದ್ದರು?" ಎಂದು ಪ್ರಶ್ನೆಯನ್ನು ಮಾಡಿದರು. ಇದಕ್ಕೆ ಕಮಲದಂಥ ವಿಶಾಲವಾದ ನೇತ್ರಗಳುಳ್ಳ ಆ ಬಾಲಕನು ತೊದಲು ನುಡಿಯಿಂದ ಹೀಗೆ ಉತ್ತರವನ್ನು ಹೇಳಿದನು:— "ಅಪ್ಪಾ! ಜಗದೀಶನಾದ ಶ್ರೀಮನ್ನಾರಾಯಣನೇ ನನಗೆ ಸಹಾಯಕನಾಗಿದ್ದನು. ಮದುವೆಯ ಮನೆಯಿಂದ ಹೊರಟು, ಕುಡುಪೂರು ಕಾನ ದೇವಾಲಯದಲ್ಲಿಯೂ ಆ ಬಳಿಕ ತಾಳಿಕುಡೆ (ಬನ್ನಿಂಜೆ) ಗ್ರಾಮದ ದೇವಾಲಯದಲ್ಲಿಯೂ ಶ್ರೀ ನಾರಾಯಣ ದೇವರಿಗೆ ನಮಸ್ಕರಿಸಿ, ಅಲ್ಲಿಂದ ಹೊರಟು ಉಡುಪಿಯಲ್ಲಿ ಪೂರ್ವ ಭಾಗಕ್ಕಿರುವ ಚಂದ್ರೇಶ್ವರ ದೇವಾಲಯದಲ್ಲಿ ಶ್ರೀ ನಾರಾಯಣನನ್ನು ನಮಸ್ಕರಿಸಿ,

ತದನಂತರ ಪಶ್ಚಿಮಕ್ಕಿರುವ ಶ್ರೀಮದನಂತೇಶ್ವರ ದೇವಾಲಯಕ್ಕೆ ಬಂದು, ಇಲ್ಲಿರುವ ಷಡ್ಗುಣೈಶ್ವರ್ಯ ಪರಿಪೂರ್ಣನಾದ ಶ್ರೀಮದನಂತೇಶ್ವರ ದೇವರಿಗೆ ನಮಸ್ಕಾರವನ್ನು ಮಾಡಿದೆನು.'' ಈ ಪ್ರಕಾರ ಆ ವಾಸುದೇವನು ಹೇಳಿ, ಉಡುಪಿಯಲ್ಲಿ ನೆರೆದ ಸಭಾಜನರು ಆಶ್ಚರ್ಯದಿಂದ ಮಾಡಿದ ಸನ್ಮಾನವನ್ನು ಸ್ವೀಕರಿಸಿ ಶೋಭಿಸಿದನು. ಸಾರಾಂಶ, ಇಷ್ಟು ಚಿಕ್ಕ ವಯಸ್ಸಿನ ಬಾಲಕನಾದರೂ ಸಹ ಕಾಡು ಮಾರ್ಗದಲ್ಲಿ ಹೆದರದೆ ಒಬ್ಬೊಂಟಿಗನಾಗಿ ಬಂದದ್ದು ಇಷ್ಟು ಮಾತ್ರವೇ ಅಲ್ಲ, ಜ್ಞಾನಿ ಶ್ರೇಷ್ಠರು ಹೇಳುವ ಮಾತನ್ನೇ ಹೇಳಿದನೆಂದು ಎಲ್ಲರೂ ಆಶ್ಚರ್ಯಪಟ್ಟು ಈ ಬಾಲಕನಿಗೆ ಸತ್ಕಾರವನ್ನು ಮಾಡಿದರು.

ತಮುಪಗೃಹ್ಯ ಸುತಂ **ಸುತಪೋನಿಧಿ**ರ್ಗೃಹಮಸೌ ಗೃಹಿಣೀ ಸಹಿತೋ ಯಯೌ ।
ಉದಯತೀತಿ ಹಿ ಬಾಲದಿವಾಕರೇ ಸ್ಮಿತಮಭೂತ್ಸುಜನಾಸನವಾರಿಜಮ್ ॥

( ಸು ಮಧ್ವವಿಜಯ ೩–೧೬ )

ಅರ್ಥ:— ಶ್ರೇಷ್ಠ ತಪೋನಿಧಿಯಾದ ಮಧ್ಯಗೇಹಭಟ್ಟನು ಪತ್ನಿಯೊಡನೆ ಆ ಮಗನನ್ನೆತ್ತಿಕೊಂಡು ಮನೆಗೆ ಹೋದನು. ಈ ಪ್ರಕಾರವಾಗಿ ಸೂರ್ಯನಂತೆ ಆ ಬಾಲಕನು ಉದಯಕ್ಕೆ ಬರುತ್ತಿರಲು (ಎಂದರೆ ಮೇಲ್ಮೆಯನ್ನು ಹೊಂದುತ್ತಿರಲು) ಕಮಲದಂತೆ ಸಜ್ಜನರ ಮುಖವು ಅರಳಿತು. (ಎಂದರೆ ಆನಂದಭರಿತವಾಯಿತು.)

ಮೇಲೆ ವಿವರಿಸಿದ ವಾಸುದೇವನ ಈ ಮೂರು ಬಾಲಲೀಲೆಗಳಿಂದ, ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯ ೧೬ನೆಯ ಅಧ್ಯಾಯದ ಮೊದಲಿನ ಮೂರು ಶ್ಲೋಕಗಳಲ್ಲಿ ಹೇಳಿದ ಅಭಯಂ, ತೇಜಃ, ಧೃತಿಃ ಮೊದಲಾದ ಎಂದರೆ ನಿರ್ಭಯ, ತೇಜಸ್ವಿತೆ, ಧೈರ್ಯ ಮುಂತಾದ ದೈವೀ ಸಂಪತ್ತಿಯ ಲಕ್ಷಣಗಳು ಈ ಬಾಲಕನಲ್ಲಿ ವ್ಯಕ್ತವಾದುವು. ಆದುದರಿಂದಲೇ ಸಜ್ಜನರು ಇವನು ಒಬ್ಬ ಮಹಾ ಪುರುಷನೆಂದು ತಿಳಿದು, ನಮ್ಮ ಉದ್ಧಾರಕ್ಕಾಗಿಯೇ ಅವತರಿಸಿದವನೆಂದು ಆನಂದಭರಿತರಾದರು.

---

# ೪ನೆಯ ಅಧ್ಯಾಯ



## ಶ್ರೀ ವಾಸುದೇವನ ಅಕ್ಷರಾಭ್ಯಾಸ

ಹಾಗೂ

## ಉಪನಯನ ಮತ್ತು ವಿದ್ಯಾಭ್ಯಾಸ.

ಮಧ್ಯಗೇಹಭಟ್ಟರು ತಮ್ಮ ಮಗನು ಮಾತುಕಥೆಗಳಲ್ಲಿ ಪ್ರತಿಭಾಶಾಲಿಯಾಗಿರುವುದನ್ನು ನೋಡಿ, ತೀರ ಚಿಕ್ಕ ವಯಸ್ಸಿನಲ್ಲಿಯೇ ಎಂದರೆ ಈ ವಾಸುದೇವನು ವಯಸ್ಸಿನಿಂದ ನಾಲ್ಕು ವರ್ಷದವನಿದ್ದಾಗಲೇ ಒಂದು ಶುಭ ದಿವಸದಲ್ಲಿ ಸುಮುಹೂರ್ತವನ್ನು ನಿಶ್ಚಯಿಸಿ, ಈತನಿಗೆ ಅಕ್ಷರಾಭ್ಯಾಸವನ್ನು ಮಾಡಿಸಿದರು. ಅರ್ಥಾತ್ ಅಕ್ಷರ ಮುಹೂರ್ತವನ್ನು ಮಾಡಿದರು. ಈ ಬಾಲಕನು ಮಹಾ ಪ್ರತಿಭಾಶಾಲಿಯಾಗಿದ್ದುದರಿಂದ ಈತನಿಗೆ ಅಕ್ಷರಗಳನ್ನು ಒಂದು ಸಲ ಹೇಳಿಕೊಟ್ಟರೆ ಸಾಕು; ಅವುಗಳನ್ನು ಚೆನ್ನಾಗಿ ತಿಳಿದುಕೊಂಡು, ಆ ಕೂಡಲೇ ತಾನೇ ಬರೆದು ತೋರಿಸುತ್ತಿದ್ದನು. ಇದೇ ಮೇರೆಗೆ ಈತನು ಗ್ರಂಥಗಳನ್ನು ಚೆನ್ನಾಗಿ ಕಿವಿಗಿಂಪಾಗುವಂತೆಯೂ ಕೇಳಿದೊಡನೆ ಅರ್ಥಜ್ಞಾನವಾಗುವಂತೆಯೂ ಸುಲಭವಾಗಿ ಓದಲು ಸ್ವಲ್ಪ ದಿವಸಗಳಲ್ಲಿಯೇ ಸಮರ್ಥನಾದನು.

ಈ ಪ್ರಕಾರ ವಾಕ್ಚತುರನಾದ ಈ ವಾಸುದೇವನು ಒಂದಾನೊಂದು ದಿವಸ ತನ್ನ ತಾಯಿಯ ತವರುಮನೆಯ ಆಪ್ತರು ವಿವಾಹ ಮಹೋತ್ಸವಕ್ಕಾಗಿ ಕರೆದದ್ದರಿಂದ ತಾಯಿಯೊಡನೆ ಘೃತವಳ್ಳಿ ( ಎಂದರೆ ನೇಯಂಪಳ್ಳಿ ) ಎಂಬ ಗ್ರಾಮಕ್ಕೆ ಹೋದನು. ಅಲ್ಲಿ ಹೋದಮೇಲೆ ಆ ನೇಯಂಪಳ್ಳಿಯಲ್ಲಿ ಧೌತಪಟನೆಂಬ ಮನೆತನದ ಶಿವಭಟ್ಟನೆಂಬ ಪೌರಾಣಿಕನು ಹೇಳುತ್ತಿರುವ ಪುರಾಣವನ್ನು ಕೇಳುವುದಕ್ಕಾಗಿ ದೊಡ್ಡದೊಂದು ಸಭೆಯೇ ನೆರೆದದ್ದನ್ನು ವಿಶಾಲ ಮೇಧಾವಿಯಾದ ಈ ವಾಸುದೇವನು ನೋಡಿದನು. ಶಬ್ದಾರ್ಥಗಳ

ವಿಷಯದಲ್ಲಿ ಜಾಣನಾದ ಈ ಬಾಲಕನು ಆ ಸಭೆಯ ಮಧ್ಯದಲ್ಲಿ ಹೋಗಿ ಕುಳಿತು ಆ ಪುರಾಣವನ್ನು ಸ್ವಲ್ಪ ಹೊತ್ತು ಕೇಳಿ, ಆ ಬಳಿಕ ಈತನು ಮಂದ ಹಾಸದಿಂದ ಆ ಪೌರಾಣಿಕರಿಗೆ ಹೀಗೆ ಸ್ಪಷ್ಟವಾಗಿ ಹೇಳಿದನು:– "ಪೌರಾಣಿಕರೇ ! ನೀವು ಹೇಳಿದ ಮಾತು, ವ್ಯಾಸ ಶುಕಾದಿ ಮಹಾತ್ಮರ ಮತಕ್ಕೆ ವಿರೋಧವಾದುದರಿಂದ ವ್ಯತ್ಯಾಸವಾಯಿತು." ವಾಸುದೇವನು ಈ ಪ್ರಕಾರ ಹೇಳಿದ ಕೂಡಲೆ ಅಲ್ಲಿ ಕೂಡಿದ ಜನಸಮೂಹವು, ಪೌರಾಣಿಕನಾದ ಶಿವ ಭಟ್ಟನನ್ನು ಲೆಕ್ಕಿಸದೆ, ಈ ಬಾಲಕನನ್ನು ಗೌರವಿಸಿ, ಈತನನ್ನು ಕುರಿತು:— "ಅಪ್ಪಾ! ಬಾಲಕನೇ ! ಹಾಗೆ ವ್ಯತ್ಯಾಸವಾಗಿದ್ದರೆ, ಸರಿಯಾದ ಅರ್ಥವನ್ನು ನೀನೇ ಹೇಳು" ಎಂದು ಆ ಸಭಾ ಜನರು ಕೇಳಲು ಈ ಬಾಲಕನು ಯೋಗ್ಯವಾದ ಅರ್ಥವನ್ನು ಹೇಳಿದನು. ಆಗ ಆ ಸಭಾ ಜನರು ಆಶ್ಚರ್ಯ ಹೊಂದಿ ಈ ವಾಸುದೇವನನ್ನು ಕೊಂಡಾಡಿದರು.

ಆ ನೇಯಂಪಳ್ಳಿಯಲ್ಲಿಯ ವಿವಾಹ ಮಹೋತ್ಸವವು ತೀರಿದ ಒಳಿಕ ವಾಸುದೇವನು ತಾಯಿಯೊಡನೆ ತಿರುಗಿ ಪಾಜಕ ಗ್ರಾಮಕ್ಕೆ ಬಂದು, ಘೃತಪಳ್ಳಿಯಲ್ಲಿ ನಡೆದ ಸಮಾಚಾರವನ್ನು ತಂದೆಗೆ ಹೇಳಿದನು. ಆ ಬಳಿಕ ಪುನಃ ತಂದೆಯನ್ನು ಕುರಿತು:– "ಅಪ್ಪಾ ! ಹೇಳು. ಆ ಶಿವಭಟ್ಟನು ಹೇಳಿದ್ದು ಸುಳ್ಳೋ ? ಅಥವಾ ನಾನು ಹೇಳಿದ್ದು ಸುಳ್ಳೋ ?" ಎಂದು ಕೇಳಿದನು. ಈ ಪ್ರಶ್ನೆಗೆ– "ಎಲೈ ಮಗನೇ ! ನೀನು ಹೇಳಿದ್ದೇ ಸತ್ಯವಾದುದು." ಎಂದು ಮಧ್ಯಗೇಹಭಟ್ಟರು ಮಗನಿಗೆ ಹೇಳಿ, "ನನ್ನ ಈ ಮಗನಿಗೆ ನೈಸರ್ಗಿಕವಾದ ಈ ಪ್ರತಿಭೆಯು ಶ್ರೀಮದನಂತೇಶ್ವರ ದೇವರ ಕೃಪೆಯಿಂದಲೇ ಪ್ರಾಪ್ತವಾದದ್ದೆ"ಂದು ಮನಸ್ಸಿನಲ್ಲಿ ಸ್ಮರಿಸಿ, ಆ ದೇವರನ್ನು ಸ್ತುತಿಸಿದನು.

ಒಂದಾನೊಂದು ದಿವಸ ಮಹಾ ಪ್ರತಿಭಾಶಾಲಿಯಾದ ವಾಸುದೇವನು ಜನರ ಕಿವಿಗೆ ಇಂಪಾಗುವಂತೆ, ಮನಸ್ಸಿಗೆ ಆನಂದವಾಗುವಂತೆ ಪುರಾಣ ಗ್ರಂಥವನ್ನು ಓದಲು, ಮಧ್ಯಗೇಹಭಟ್ಟರು ಆ ಪುರಾಣದ ಅರ್ಥವನ್ನು ವಿವರಿಸಿ ಹೇಳಿದರು. ಆ ಕಾಲಕ್ಕೆ ಅನೇಕ ವೃಕ್ಷಗಳ ಶಬ್ದಾರ್ಥಗಳನ್ನು ಹೇಳುವ ಪ್ರಸಂಗದಲ್ಲಿ ಲಿಕುಚವೆಂಬ ಸಂಸ್ಕೃತ ಶಬ್ದಕ್ಕೆ ಅರ್ಥವನ್ನು ಮಧ್ಯಗೇಹಭಟ್ಟರು ಹೇಳದೆ, ಪುರಾಣದ ಅರ್ಥವನ್ನು ಹಾಗೆಯೇ

ಮುಂದಕ್ಕೆ ಸಾಗಿಸಲು, "ಅಪ್ಪಾ! 'ಲಿಕುಚ' ಎಂಬ ಶಬ್ದದ ಅರ್ಥವನ್ನು ಹೇಳದೆ ಯಾಕೆ ಮುಂದೆ ಪುರಾಣಾರ್ಥವನ್ನು ಹೇಳುವಿ?" ಎಂದು ವಾಸುದೇವನು ತಂದೆಯನ್ನು ಕುರಿತು ಮೆಲ್ಲಗೆ ಕೇಳಿದನು. ಸಾಮಾನ್ಯತಃ ಪೌರಾಣಿಕರು ಪುರಾಣ ಹೇಳುತ್ತಿರುವಾಗ ಮಧ್ಯದಲ್ಲಿ ಆ ಪುರಾಣದೊಳಗಿನ ಕೆಲವು ಶಬ್ದಗಳ ಅರ್ಥವು ತಮಗೆ ತಿಳಿಯದಿದ್ದರೆ, ಅವುಗಳಿಗೆ ಅರ್ಥವನ್ನು ಹೇಳದೆ, ಹಾಗೆಯೇ ಮುಂದಕ್ಕೆ ಪುರಾಣಾರ್ಥವನ್ನು ಸಾಗಿಸುವುದು ಪದ್ಧತಿಯಾಗಿದೆ. ಇರಲಿ. ಲಿಕುಚ ಶಬ್ದದ ಅರ್ಥವನ್ನು ಹೇಳೆಂದು ಮಗನು ಕೇಳಿದರೂ ತಂದೆಯು ಅದರ ಅರ್ಥವನ್ನು ಹೇಳದಿರಲು, ಆಗ ಆ ಸಭಿಕರೆಲ್ಲರೂ ಅದರ ಅರ್ಥವನ್ನು ತಿಳಿದುಕೊಳ್ಳುವ ಕುತೂಹಲವನ್ನು ವ್ಯಕ್ತಪಡಿಸಲು, ಈ ವಾಸುದೇವನು ಲಿಕುಚ ಶಬ್ದಕ್ಕೆ **'ಹೆಬ್ಬಲಸು'**[೧] ಎಂದು ಅರ್ಥವನ್ನು ಹೇಳಿ, ಆ ಸಭಿಕರಿಂದ ಬಹುಮಾನವನ್ನು ಹೊಂದಿದನು.

ಶ್ರುತಿ, ಸ್ಮೃತಿ, ಶಾಸ್ತ್ರಗಳಲ್ಲಿ ನಿಷ್ಣಾತರಾದಂಥ ಮಧ್ಯಗೇಹಭಟ್ಟರು ಇಂತಹ ಮಹಾ ಪ್ರತಿಭಾಶಾಲಿಯಾದ ತಮ್ಮ ಮಗನಿಗೆ ೫ ವರ್ಷ ವಯಸ್ಸಾದ ಕೂಡಲೆ ಉಪನಯನವನ್ನು ಮಾಡಬೇಕೆಂದು ನಿಶ್ಚಯಿಸಿದರು; ಯಾಕೆಂದರೆ, ಬ್ರಾಹ್ಮಣ ಪುತ್ರನಿಗೆ ೮ನೆಯ ವರ್ಷಕ್ಕೆ ಉಪನಯನವನ್ನು ಮಾಡಬೇಕೆಂಬುದು ಸಾಧಾರಣ ನಿಯಮವೆಂದೂ, ಯಾವ ಬಾಲಕನು ವೇದಶಾಸ್ತ್ರಗಳ ಅಧ್ಯಯನದಿಂದ ಬ್ರಹ್ಮತೇಜಸ್ಸನ್ನು ಪಡೆಯಬೇಕೆಂಬ ಇಚ್ಛೆಯುಳ್ಳವನಿರುವನೋ ಅಂಥವನಿಗೆ ೫ನೆಯ ವರ್ಷದ ವಯಸ್ಸಿಗೆ ಮಾಡಬೇಕೆಂದೂ ಮನುಋಷಿಯು ತನ್ನ ಸ್ಮೃತಿಯಲ್ಲಿ ಹೇಳಿದ್ದಾನೆ.[೨] ಈ ಮನುವಚನಕ್ಕನುಸರಿಸಿ, ಮಧ್ಯಗೇಹಭಟ್ಟರು ವಾಸುದೇವನು ೫ ವರ್ಷದವನಾದ ಕೂಡಲೆ ಸುಮುಹೂರ್ತವನ್ನು ನಿಶ್ಚಯಿಸಿ, ಈತನಿಗೆ ಉಪನಯನವನ್ನು

---

೧ ಹಲಸಿನ ಗಿಡದಲ್ಲಿ 'ಹೆಬ್ಬಲಸು' (ಎಂದರೆ ದೊಡ್ಡ ಹಲಸಿನ ಗಿಡ) ಎಂಬುದೊಂದು ಬೇರೆ ಜಾತಿಯಿದೆ. ಈ ಹೆಬ್ಬಲಸಿನ ಗಿಡದ ಹಣ್ಣು, ಕಸಿಮಾವಿನ ಹಣ್ಣಿನ ಆಕಾರದಷ್ಟು ಚಿಕ್ಕದಾಗಿದ್ದು, ಈ ಜಾತಿಯ ಗಿಡಗಳ ದೇಹವು ಮಾತ್ರ ಬಹಳ ದಪ್ಪವಾಗಿಯೂ (ಎಂದರೆ ಅಗಲವಾಗಿಯೂ) ಎತ್ತರವಾಗಿಯೂ ಇರುತ್ತದೆ. ಇದರಲ್ಲಿ ಹಲಗೆಗಳನ್ನು ಕೊರೆದರೆ, ಬಹಳ ಅಗಲವಾದ ಹಲಗೆಗಳು ಹೊರಡುತ್ತವೆ. ಆದುದರಿಂದಲೇ ಇದಕ್ಕೆ 'ಹೆಬ್ಬಲಸಿನ ಗಿಡ' ಎಂಬ ಹೆಸರು ಪ್ರಾಪ್ತವಾಗಿದೆ. (೨) ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಮ್ । (ಮನುಸ್ಮೃತಿ ಅ. ೨ ಶ್ಲೋ. ೩೬), ಬ್ರಹ್ಮವರ್ಚಸಕಾಮಸ್ಯ ಕಾರ್ಯಂ ವಿಪ್ರಸ್ಯ ಪಂಚಮೇ॥ (ಮನು ೨-೩೭)

ಮಾಡಲು ಏರ್ಪಡಿಸಿದರು. ಈ ತಪೋನಿಧಿಯಾದ ಮಧ್ಯಗೇಹಭಟ್ಟರು ಉಪನಯನಕ್ಕೆ ಬೇಕಾಗುವ ಸಕಲ ಸಾಮಗ್ರಿಗಳನ್ನು ಒದಗಿಸಿಕೊಂಡು, ಯಥಾವಿಧಿಯಾಗಿ ಉಪನಯನಾಂಗ ಶುಭಕರ್ಮಗಳನ್ನು ಆಚರಿಸುತ್ತ ಅಗ್ನಿಯಲ್ಲಿ ವಿಧ್ಯುಕ್ತ ಹೋಮವನ್ನು ಮಾಡಿ, ಬಾಲಕನಿಗೆ ಚೂಡಾಕರ್ಮವನ್ನು ಎಂದರೆ ಚೌಲವನ್ನು ಮಾಡಿಸಿ, ಮಂಗಲಸ್ನಾನಾನಂತರ ಪುಣ್ಯಶ್ಲೋಕನಾದ ಈ ಮಗನಿಗೆ ಬ್ರಹ್ಮೋಪದೇಶವನ್ನು ಮಾಡಿದರು. ಈ ಪ್ರಕಾರ ಉಪನಯನ ಮಾಡಿದ ಬಳಿಕ ಮಧ್ಯಗೇಹಭಟ್ಟರು ಈ ವಾಸುದೇವನನ್ನು ಕುರಿತು:— "ಎಲೈ ಮಗನೇ! ನೀನು ಸದಾಚಾರಸಂಪನ್ನನಾಗಿ ಅಗ್ನಿಯನ್ನೂ ಗುರುಗಳನ್ನೂ ಸೇವಿಸು. ಬ್ರಹ್ಮಚರ್ಯಾದಿ ವ್ರತಗಳನ್ನಾಚರಿಸುತ್ತ ವೇದ-ವೇದಾಂಗಾದಿ ಸಕಲ ಸಚ್ಛಾಸ್ತ್ರಗಳನ್ನು ಚೆನ್ನಾಗಿ ಓದು." ಎಂದು ಉಪದೇಶ ಮಾಡಿದರು.

ತಂದೆಯ ಉಪದೇಶದಂತೆ ಚತುರನಾದ ವಾಸುದೇವನು ಸದಾಚಾರಗಳನ್ನು ಆಚರಿಸುತ್ತ ತೋಟಂತಿಲ್ಲಾಯ ಶಾಸ್ತ್ರಿಗಳೆಂಬ ಗುರುಗಳ ಬಳಿಯಲ್ಲಿ ವಿದ್ಯಾಭ್ಯಾಸವನ್ನು ಮಾಡಲುಪಕ್ರಮಿಸಿದನು.

ಪುರಾಣನ್ಯಾಯ ಮೀಮಾಂಸಾ ಧರ್ಮಶಾಸ್ತ್ರಾಂಗ ಮಿಶ್ರಿತಾಃ ।
ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥
(ಯಾಜ್ಞವಲ್ಕ್ಯಸ್ಮೃತಿ ೧-೩)

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಇವು ನಾಲ್ಕು ವೇದಗಳು. ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಇವು ಆರು ವೇದದ ಅಂಗಗಳು. ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ ಇವು ನಾಲ್ಕು ವೇದದ ಉಪಾಂಗಗಳು. ವೇದದಲ್ಲಿ-ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರಗಳೆಂಬ ಈ ನಾಲ್ಕು ಉಪವೇದಗಳು ಸಮಾವೇಶವಾಗುತ್ತವೆ. ಪುರಾಣದಲ್ಲಿ-೧೮ ಮಹಾ ಪುರಾಣಗಳೂ ೧೮ ಉಪ ಪುರಾಣಗಳೂ ಒಳಪಡುತ್ತವೆ. ನ್ಯಾಯದಲ್ಲಿ - ನ್ಯಾಯದರ್ಶನ,ವೈಶೇಷಿಕ ದರ್ಶನ,ಎಂಬೆರಡು ಶಾಸ್ತ್ರಗಳು ಅಂತರ್ಭೂತವಾಗುತ್ತವೆ. ಮೀಮಾಂಸೆಯಲ್ಲಿ—ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾ ಎಂದು ಎರಡು ಭಾಗಗಳಿವೆ. ಧರ್ಮಶಾಸ್ತ್ರದಲ್ಲಿ—ಮನು, ಯಾಜ್ಞವಲ್ಕ್ಯಾದಿ ಋಷಿ

ಪ್ರಣೀತ ೨೨ ಸ್ಮೃತಿಗಳೂ, ರಾಮಾಯಣ, ಮಹಾ ಭಾರತಗಳೆಂಬ ಇತಿಹಾಸ ಗಳೂ, ಪಾಂಚರಾತ್ರ ಪಾಶುಪತ, ವೈಷ್ಣವ ದರ್ಶನಗಳೂ, ಸಾಂಖ್ಯ ಹಾಗೂ ಯೋಗ ದರ್ಶನಗಳೂ ಸಮಾವೇಶವಾಗುತ್ತವೆ. ಒಟ್ಟು ೪ ವೇದಗಳು, ೬ ಅಂಗಗಳು, ೪ ಉಪಾಂಗಗಳು ಕೂಡಿ ೧೪ ವಿದ್ಯೆಗಳಾಗಿರುತ್ತವೆ.

ವಾಸುದೇವನು ಈ ಚತುರ್ದಶ ವಿದ್ಯೆಗಳಲ್ಲಿಯೂ ಪ್ರವೀಣನಾದನು. ಮತಸ್ಥಾಪಕರಿಗೆ ಅತ್ಯವಶ್ಯಕವಾದಂಥ "ಭಗವದ್ಗೀತೆ,[೧] ಹತ್ತು ಉಪನಿಷತ್ತು ಗಳು, ಬ್ರಹ್ಮಸೂತ್ರ " ಎಂಬ ಈ ಪ್ರಸ್ಥಾನತ್ರಯದ ಅರ್ಥವಂತೂ ಈತನಿಗೆ ಕರತಲಾಮಲಕದಂತೆ ಸ್ಪಷ್ಟವಾಗಿತ್ತು. ಈ ವಾಸುದೇವನು ತನ್ನ ಪ್ರತಿಭಾ ಶಕ್ತಿಯನ್ನು ವ್ಯಕ್ತಪಡಿಸಿ, ಅಧ್ಯಯನ ಮಾಡುವ ಪದ್ಧತಿಯನ್ನು ನೋಡಿ, ಗುರುಗಳು ಆಶ್ಚರ್ಯಚಕಿತರಾದರು.

ಗುರುಕುಲವಾಸವನ್ನು ಮುಗಿಸಿ ಮನೆಗೆ ಬರುವಾಗ ಗುರುದಕ್ಷಿಣೆ ಯನ್ನು ಕೊಡುವ ಸಂಪ್ರದಾಯವು ಭಾರತೀಯರಲ್ಲಿ ಪ್ರಸಿದ್ಧವಾಗಿಯೇ ಇದೆ. ಈ ಸಂಪ್ರದಾಯಕ್ಕನುಸರಿಸಿ ವಾಸುದೇವನು ಗುರುಗಳಿಗೆ ಗುರು ದಕ್ಷಿಣೆಯನ್ನು ಹೇಗೆ ಕೊಟ್ಟನೆಂಬುದನ್ನು ನಾರಾಯಣ ಪಂಡಿತಾಚಾರ್ಯರು ಸುಮಧ್ವವಿಜಯದಲ್ಲಿ ( ೩-೫೫ ) ಹೀಗೆ ಹೇಳಿದ್ದಾರೆ:—

ಸಾಕ್ಷಾದಥೋಪನಿಷದೋ ವಿಭುರೈತರೇಯ್ಯಾಃ **ಪಾಠಚ್ಛಲೇನ**
ವಿಜನೇಽರ್ಥರಸಾನ್ ಬ್ರುವಾಣಃ ॥
ಅಧ್ಯಾಪಕಾಯ ವಿತತಾರ ವಿಮೋಕ್ಷಬೀಜಂ **ಗೋವಿಂದಭಕ್ತಿ**
ಮುಚಿತಾಂ ಗುರುದಕ್ಷಿಣಾಂ ಸಃ ॥

ಅರ್ಥ:— ವಾಸುದೇವನು ಐತರೇಯೋಪನಿಷತ್ತಿನ ಪಾಠವನ್ನು ಒಪ್ಪಿಸುವ ವ್ಯಾಜದಿಂದ ಆ ಉಪನಿಷತ್ತಿನ ತತ್ತ್ವಾರ್ಥಗಳನ್ನು ಆ ಗುರು ಗಳಿಗೆ ವಿಶದ ಮಾಡಿ ಹೇಳಿ, ತಾನು ಮಾಡಿದ ವೇದಾಧ್ಯಯನಕ್ಕೆ ಯೋಗ್ಯ ವಾದ ಗುರುದಕ್ಷಿಣೆಯೇ ಇದೆಂದು ಮೋಕ್ಷಕ್ಕೆ ಕಾರಣವಾದ ವಿಷ್ಣುಭಕ್ತಿ ಯೆಂಬ ಗುರುದಕ್ಷಿಣೆಯನ್ನು ಆ ಅಧ್ಯಾಪಕರಿಗೆ ಕೊಟ್ಟನು.

---

೧ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ.

ಶ್ರೀಮನ್ಮಧ್ವಾಚಾರ್ಯರು ಅವತರಿಸಿದ ಕಾಲದಲ್ಲಿ, ಈ ತುಳುನಾಡಿನಲ್ಲಿ ವಾಸವಾಗಿರುವ ಕಾಣ್ವಶಾಖೆಯ ಬ್ರಾಹ್ಮಣರು, ಅರವತ್ತೊಕ್ಕಲು ಬ್ರಾಹ್ಮಣರು, ಹೊಯ್ಸಳ ಕರ್ಣಾಟಕ ಬ್ರಾಹ್ಮಣರು, ಬಡಗನಾಡು ಕರ್ಣಾಟಕ ಬ್ರಾಹ್ಮಣರು, ತೌಳವ (ಎಂದರೆ ಶಿವಳ್ಳಿ) ಬ್ರಾಹ್ಮಣರು, ಹವ್ಯಕ ಬ್ರಾಹ್ಮಣರು ಕೋಟ, ಕೋಟೇಶ್ವರ ಬ್ರಾಹ್ಮಣರು ಪ್ರಭೃತಿ ಎಲ್ಲ ಪಂಗಡಗಳ ಬ್ರಾಹ್ಮಣರೂ ಅದ್ವೈತ ಮತಾನುಯಾಯಿಗಳಾಗಿದ್ದರು. ಈ ಅದ್ವೈತ ಮತಾನುಯಾಯಿಗಳ ಮನಸ್ಸಿನ ಒಲವು, ವಿಷ್ಣು ಭಕ್ತಿಗಿಂತಲೂ ಶಿವ ಭಕ್ತಿಯ ಕಡೆಗೆ ಹೆಚ್ಚಾಗಿರುತ್ತದೆಂಬುದನ್ನು ಈ ಮೊದಲೇ ೧ನೆಯ ಅಧ್ಯಾಯದಲ್ಲಿ ಸೋಪಪತ್ತಿಕವಾಗಿ ಹೇಳಿದ್ದೇವೆ. ಸಾರಾಂಶ, ತುಳು ದೇಶದಲ್ಲಿರುವ ಎಲ್ಲ ಪಂಗಡಗಳ ಬ್ರಾಹ್ಮಣರೂ ಅದ್ವೈತ ಮತಾನುಯಾಯಿಗಳೂ ಶಿವ ಭಕ್ತರೂ [೧] ಆಗಿದ್ದರು. ಅರ್ಥಾತ್ ಈ ವಾಸುದೇವನ ಅಧ್ಯಾಪಕರಾದ ಪೂಗವನ ಶಾಸ್ತ್ರಿಗಳು ಅದ್ವೈತಮತಾನುಯಾಯಿಗಳೂ ಶಿವಭಕ್ತರೂ ಆಗಿದ್ದರೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಶಿವಭಕ್ತರಾದ ಈ ಅಧ್ಯಾಪಕರಿಗೆ

---

೧ ಈ ವಾಸುದೇವನು ವಿದ್ಯಾರ್ಥಿಯಾಗಿದ್ದಾಗ್ಗೆ ಈ ತುಳುನಾಡಿನಲ್ಲಿ ಬ್ರಾಹ್ಮಣರೆಲ್ಲರೂ ಶಿವ ಭಕ್ತರಾಗಿದ್ದುದರಿಂದ ಈ ತೌಳವ ದೇಶದಲ್ಲಿ ಎತ್ತ ನೋಡಿದತ್ತ ಶಿವಲಿಂಗಗಳೂ ಗಣಪತಿ ದೇವಸ್ಥಾನಗಳೂ ದುರ್ಗಾ ದೇವಾಲಯಗಳೂ ಹಾಗೂ ಷಣ್ಮುಖ ಎಂದರೆ ಸುಬ್ರಹ್ಮಣ್ಯ ದೇವಾಲಯಗಳೂ ಈಗಲೂ ದೃಷ್ಟಿಗೋಚರವಾಗುತ್ತಲಿವೆ. ಶಿವರೂಪ್ಯವೆಂಬ ಶೈವ ಕ್ಷೇತ್ರದಲ್ಲಿರುವ ಚಂದ್ರಮೌಳೀಶ್ವರ, ಅನಂತೇಶ್ವರ ಇವೆರಡೂ ಶಿವಲಿಂಗಗಳೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿದೆ. ಆದರೆ ಕೆಲವರು ಚಂದ್ರಮೌಳೀಶ್ವರನೊಬ್ಬನು ಮಾತ್ರ ಶಿವನೆಂದು ಒಪ್ಪಿ, ಅನಂತೇಶ್ವರನು ನಾರಾಯಣನೆಂದು ಹೇಳಲು ಪ್ರಯತ್ನ ಮಾಡಿದ್ದಾರೆ. ಆದರೆ ಈ ಅನಂತೇಶ್ವರ ದೇವಾಲಯದ ಗರ್ಭಗೃಹದಲ್ಲಿ ಲಿಂಗವಿದೆಯೇ ಹೊರತು ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದಂಥ ವಿಷ್ಣುಮೂರ್ತಿಯಿಲ್ಲ. ಶಿವನ ಲಿಂಗಕ್ಕೆ (ಎಂದರೆ ಶಿಶ್ನಕ್ಕೆ) ಪೂಜಿಸಬೇಕೆಂದು ಭೃಗುಋಷಿಯ ಶಾಸನವಿರುತ್ತದೆಂಬುದಾಗಿ ಶ್ರೀ ವೇದವ್ಯಾಸರು ತಾವು ರಚಿಸಿದ ಪುರಾಣಗಳಲ್ಲಿ ಹೇಳಿದ್ದಾರೆಯೇ ಹೊರತು, ಶ್ರೀಹರಿಯ ಶಿಶ್ನಕ್ಕೆ (ಎಂದರೆ ಲಿಂಗಕ್ಕೆ) ಪೂಜಿಸಬೇಕೆಂದಾಗಲಿ ಅಥವಾ ಶ್ರೀಹರಿಯು ಶಿಶ್ನಾಕಾರನಿದ್ದಾನೆಂದಾಗಲಿ ಯಾವ ಪುರಾಣದಲ್ಲಿಯೂ ಹೇಳಿರುವುದಿಲ್ಲ. ಈ ಅನಂತೇಶ್ವರ ದೇವಾಲಯಕ್ಕೆ ನಾನು ಹೋದಾಗ್ಗೆ ವೃದ್ಧ ತೌಳವ ಬ್ರಾಹ್ಮಣರು "ನಾವು ಚಿಕ್ಕವರಿದ್ದಾಗ ಈ ಅನಂತೇಶ್ವರನ ಮುಂದೆ ನಂದಿಯು ಇದ್ದಿತು. ಈಚೆಗೆ ಅದನ್ನು ತೆಗೆದು ಹಾಕಿದ್ದಾರೆ." ಎಂದು ನನಗೆ ಹೇಳಿದರು. ಈ ಅನಂತೇಶ್ವರ ದೇವಾಲಯದಲ್ಲಿ ಒಂದು ಶಿಲಾಶಾಸನವಿದ್ದು, ಆದರಲ್ಲಿ ೧೨೪೮ನೆಯ ಶಕವರ್ಷದಲ್ಲಿ ಶ್ರೀ ವೀರ ಬುಕ್ಕಣ್ಣೊಡೆಯರ ನಿರೂಪದಿಂದ ಶ್ರೀಮನ್ಮಹಾ ಪ್ರಧಾನಂ ಗೋಪರಸ ಒಡೆಯರು ಈ ಅನಂತೇಶ್ವರ ದೇವರಿಗೆ ಭೂದಾನ

ಶಿಷ್ಯನಾದ ಈ ವಾಸುದೇವನು ಐತರೇಯೋಪನಿಷತ್ತಿನಲ್ಲಿರುವ ತತ್ತ್ವಾರ್ಥಗಳನ್ನು ವಿಶದ ಮಾಡಿ ಹೇಳಿ, ಆ ಅಧ್ಯಾಪಕರನ್ನು ವಿಷ್ಣುಭಕ್ತರನ್ನಾಗಿ ಮಾಡಿದನೆಂಬುದೇ ಮೇಲೆ ಹೇಳಿದ ಶ್ಲೋಕದ ತಾತ್ಪರ್ಯವು ವಿಷ್ಣು ಭಕ್ತಿಯನ್ನು ಎಲ್ಲರಲ್ಲಿಯೂ ಚೆನ್ನಾಗಿ ನೆಲೆಗೊಳಿಸುವಂತೆ ಉಪದೇಶ ಮಾಡುವುದಕ್ಕೆ ಐತರೇಯೋಪನಿಷತ್ತು ಉತ್ತಮವಾದ ಸಾಧನವಾಗಿರುತ್ತದೆಂಬುದನ್ನು ಶ್ರೀಮನ್ಮಧ್ವಾಚಾರ್ಯರು ವಿದ್ಯಾರ್ಥಿಯಾಗಿದ್ದಾಗಲೇ ಕಂಡುಹಿಡಿದಿದ್ದರೆಂಬುದು ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. ಇಷ್ಟಕ್ಕೂ ಈ ಐತರೇಯೋಪನಿಷತ್ತಿನಲ್ಲಿ ಶ್ರೀ ವಿಷ್ಣುವಿನ ಮಾಹಾತ್ಮ್ಯವು ಮುಖ್ಯವಾಗಿ ಪ್ರತಿಪಾದಿಸಲ್ಪಟ್ಟಿರುತ್ತದೆಂದು ಸ್ವತಃ ಶ್ರೀಮದಾಚಾರ್ಯರೇ ಈ ಉಪನಿಷದ್ಭಾಷ್ಯದ ಆರಂಭದಲ್ಲಿ ಸಪ್ರಮಾಣವಾಗಿ ಹೀಗೆ ಹೇಳಿದ್ದಾರೆ:—

"ಮಹಾಭೂತಿಃ ಶ್ರುತಿಃ ಸ್ವೈಷಾ ಮಹಾಭೂತಿರ್ಯತೋ ಹರಿಃ ।
ವಿಶೇಷೇಣಾತ್ರ ಕಥಿತಃ ಸರ್ವಜ್ಞಃ ಶಾಶ್ವತಃ ಪ್ರಭುಃ ॥
ಇತಿ ಋಕ್ಸಂಹಿತಾಯಾಂ ॥"

ಅರ್ಥ:— ಮಹದೈಶ್ವರ್ಯರೂಪನಾದ ಶ್ರೀಹರಿಯು ಈ ಉಪನಿಷತ್ತಿನಲ್ಲಿ ಅರ್ಥಾತ್ ಈ ಶ್ರುತಿಯಲ್ಲಿ ಪ್ರತಿಪಾದಿಸಿಕೊಳ್ಳಲ್ಪಟ್ಟಿದ್ದರಿಂದ ಈ ಶ್ರುತಿಯು (ಮಹತೀ ಭೂತಿಃ ಐಶ್ವರ್ಯರೂಪಃ ಹರಿಃ ಯಸ್ಯಾಂ ಎಂಬೀ ವ್ಯುತ್ಪತ್ತಿಯಿಂದ) "ಮಹಾಭೂತಿ ಶ್ರುತಿಃ" ಎಂದೆನ್ನಿಸಿಕೊಳ್ಳುತ್ತದೆ. (ಮತ್ತು) ಇದರಲ್ಲಿ ಶ್ರೀಹರಿಯು ಸರ್ವಜ್ಞನೂ ಶಾಶ್ವತನೂ ಗುಣಪರಿಪೂರ್ಣನೂ ಎಂದೂ ಮುಖ್ಯವಾಗಿ ಹೇಳಲ್ಪಡುತ್ತಾನೆ. ಎಂದು ಋಕ್ಸಂಹಿತೆಯಲ್ಲಿ ಉಕ್ತವಾಗಿದೆ.

---

ಮಾಡಿದ ವೃತ್ತಾಂತವಿದೆ. ಈ ಶಾಸನದ ಮೇಲ್ಭಾಗದಲ್ಲಿ ಶಿವಲಿಂಗದ ವಿಗ್ರಹವೇ ಇದ್ದು, ಆರಂಭದಲ್ಲಿ "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ। ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ।" ಎಂದು ಶಿವನಸ್ತುತಿಯೇ ಇದೆ. ಆತಏವ ಶ್ರೀ ಅನಂತೇಶ್ವರನು ಶಿವನೆಂಬುದು ಸಿದ್ಧ. ನಾರಾಯಣ ಪಂಡಿತಾಚಾರ್ಯರು ಸುಮಧ್ವವಿಜಯದಲ್ಲಿ ಈ ಅನಂತೇಶ್ವರನನ್ನು ನಾರಾಯಣ (೨-೧೮), ವಿಷ್ಣು (೨-೨೪) ಮುಂತಾದ ವಿಷ್ಣುನಾಮಗಳಿಂದ ಸಂಬೋಧಿಸಿರುವುದು, ಮಧ್ವಮತ ಸಿದ್ಧಾಂತಕ್ಕನುಸರಿಸಿ ಅನಂತೇಶ್ವರ ಲಿಂಗಾಂತರ್ಯಾಮಿಯಾದ (ಎಂದರೆ ಶಿವಾಂತರ್ಯಾಮಿಯಾದ) ನಾರಾಯಣನನ್ನು ಅನುಲಕ್ಷಿಸಿ ಇರುತ್ತದೆಂದು ಹೇಳುವುದು ಯಥಾ ನ್ಯಾಯವಾಗಿದೆ.

ಆದುದರಿಂದಲೇ ಶ್ರೀಮನ್ಮಧ್ವಾಚಾರ್ಯರು ಶಿವಭಕ್ತರಾದ ತಮ್ಮ ಅಧ್ಯಾಪಕರ ಮೇಲೆ ಈ ಐತರೇಯೋಪನಿಷತ್ತನ್ನು ಪ್ರಯೋಗ ಮಾಡಿ, ಅವರನ್ನು ವಿಷ್ಣುಭಕ್ತರನ್ನಾಗಿ ಮಾಡಿದರು. ಇಷ್ಟೇ ಅಲ್ಲ ಮುಂದೆ ಯಾವ ಯಾವ ಸ್ಥಳಗಳಲ್ಲಿ ವಿಷ್ಣುಭಕ್ತಿಯನ್ನು ಪ್ರಸಾರ ಮಾಡಿದರೋ, ಆಯಾ ಸ್ಥಳದಲ್ಲಿ ಶ್ರೀಮದಾಚಾರ್ಯರು ಜನರಿಗೆ ಈ ಐತರೇಯೋಪನಿಷತ್ತನ್ನೇ ಉಪದೇಶಿಸಿದರು.

---

# ೫ನೆಯ ಅಧ್ಯಾಯ

## ವಾಸುದೇವನು ಸನ್ಯಾಸಾಶ್ರಮವನ್ನು ಸ್ವೀಕರಿಸುತ್ತಾನೆ.

ವಾಸುದೇವನು ಗುರುಕುಲವಾಸವನ್ನು ಮುಗಿಸಿ, ಮನೆಗೆ ಬಂದ ಮೇಲೆ, ದ್ವೈತಸಿದ್ಧಾಂತವನ್ನೂ ವಿಷ್ಣು ಭಕ್ತಿಯನ್ನೂ ದೇಶದಲ್ಲಿ ಎಲ್ಲ ಕಡೆಗೂ ಪ್ರಚಾರ ಮಾಡುವ ಈ ಮಹಾ ಕಾರ್ಯವು, ನಾನು ಯಾವ ಮಾರ್ಗವನ್ನು ಅನುಸರಿಸಿದರೆ ನೆರವೇರುವುದು? ಎಂದು ಆಲೋಚಿಸಲಾರಂಭಿಸಿದನು. ವಿಷಯಸಂಗ ಪರಿತ್ಯಾಗದಿಂದಲೇ ಎಂದರೆ ವೈರಾಗ್ಯದಿಂದಲೇ ಪರಮಾತ್ಮನಲ್ಲಿ ಆಸಕ್ತಿಯುಂಟಾಗಿ ಈ ಮಹಾ ಕಾರ್ಯವು ನೆರವೇರುವುದು. ಯಾಕೆಂದರೆ, ಶ್ರೇಷ್ಠರಾದ ಶಿಷ್ಟಜನರ ಆಚಾರವನ್ನೇ ಸಾಮಾನ್ಯ ಜನರು ಅನುಕರಣ ಮಾಡುವರು. ಆದುದರಿಂದ ನಾನು ಪರಮಹಂಸ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ನನ್ನ ಸ್ವಾಭಾವಿಕವಾದ ವಿಷಯ ವೈರಾಗ್ಯವನ್ನು ಪ್ರಕಟಿಸಿ, ಶ್ರೀಹರಿಯ ಭಕ್ತಿಯನ್ನೂ ದ್ವೈತ ಸಿದ್ಧಾಂತವನ್ನೂ ಎಲ್ಲ ಕಡೆಗೂ ಪ್ರಚಾರ ಮಾಡುವೆನೆಂದು ದೃಢ ಸಂಕಲ್ಪವನ್ನು ಮಾಡಿದನು. ಇತ್ತ ಮನೆಯಲ್ಲಿ ತಾಯಿತಂದೆಗಳು ತಮ್ಮ ಮಗನು ಬ್ರಹ್ಮಚರ್ಯ ಸಮಾವರ್ತನವಾದ ಬಳಿಕ ವಿವಾಹವನ್ನು ಮಾಡಿಕೊಂಡು, ಗೃಹಸ್ಥಾಶ್ರಮದಲ್ಲಿ ಪ್ರವೇಶಿಸಿ, ಅನೇಕ ಜನ ಮಕ್ಕಳನ್ನು ಹಡೆದು, ತನ್ನ ಪಾಂಡಿತ್ಯದಿಂದ ಕೀರ್ತಿಯನ್ನೂ ಧನವನ್ನೂ ಹೇರಳವಾಗಿ ಸಂಪಾದಿಸುತ್ತ ತಮ್ಮನ್ನು ವೃದ್ಧಾಪ್ಯದಲ್ಲಿ ಸುಖದಿಂದ ಕಾಪಾಡುತ್ತಾನೆಂದು ಮನೋರಾಜ್ಯವನ್ನು ಮಾಡುತ್ತ ಸಂತೋಷದಲ್ಲಿದ್ದರು. ಆದರೆ ವಾಸುದೇವನು ತಾನು ಗೃಹಸ್ಥಾಶ್ರಮವನ್ನು ಸ್ವೀಕರಿಸಿದರೆ ತನ್ನ ಧ್ಯೇಯವು ನೆರವೇರುವುದಿಲ್ಲವೆಂದು ತಿಳಿದು, ತನ್ನ ಈ ಮಹಾ ಕಾರ್ಯವು ಜಯಪ್ರದವಾಗಬೇಕಾದರೆ ತಾನು ಸನ್ಯಾಸಾಶ್ರಮವನ್ನು ಅಂಗೀಕರಿಸುವುದೇ ಯೋಗ್ಯವೆಂದು ನಿಶ್ಚಯಿಸಿ, ಸನ್ಯಾಸವನ್ನು ಕೊಡುವ ಸದ್ಗುರುಗಳನ್ನು ಹುಡುಕುತ್ತ ಹೊರಟನು.

ಅಚ್ಯುತಪ್ರೇಕ್ಷರೆಂಬ ಪರಮಯೋಗ್ಯರಾದ ಯತಿವರ್ಯರು ಉಡುಪಿಯಲ್ಲಿ ರುತ್ತಿರಲು ಅಲ್ಲಿಗೆ ವಾಸುದೇವನು ಬಂದನು. ಇತ್ತ ಈ ವಾಸುದೇವನ ತಂದೆ ತಾಯಿಗಳು ತಮ್ಮ ಮಗನು ವೈರಾಗ್ಯವುಳ್ಳವನಾಗಿ ಸನ್ಯಾಸಾಶ್ರಮವನ್ನು ಹೊಂದಬೇಕೆಂದು ನಿಶ್ಚಯಿಸಿಕೊಂಡು, ಶ್ರೇಷ್ಠ ಯತಿಗಳಾದ ಅಚ್ಯುತ ಪ್ರೇಕ್ಷರ ಶಿಷ್ಯನಾಗಿರುವನೆಂದು ತಿಳಿದು, ಮಗನ ವಿರಹ ತಾಪದಿಂದ ಬೆಂದು ಬೆಂಡಾಗಿ ಉಡುಪಿಯಲ್ಲಿರುವ ಆ ವಾಸುದೇವನ ಬಳಿಗೆ ಬಂದರು. ಮತ್ತು ಆತನನ್ನು ಕುರಿತು—"ಅಪ್ಪಾ! ಮುದ್ದು ಮಗನೇ! ಮುದುಕರಾಗಿ ಅನಾಥರಾದ ನಾವಿಬ್ಬರೂ ಬದುಕಿರುವಾಗ ನೀನು ಸನ್ಯಾಸಾಶ್ರಮವನ್ನು ಸ್ವೀಕರಿಸುವುದು ಉಚಿತವಲ್ಲ." ಎಂದು ಬಹು ಪರಿಯಿಂದ ಹೇಳಿ, ಆ ತಂದೆ ತಾಯಿಗಳು ಚಿಂತೆಯಿಂದ ಪರವಶರಾಗಿ ವಿಸ್ಮರಣೆಯಿಂದ ಮಗನಾದ ಈ ವಾಸುದೇವನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರು. ಆಗ ವಾಸುದೇವನು ಅವರನ್ನು ಕುರಿತು—"ವಿಧೇಯನಾದ ನನ್ನಂಥ ಚಿಕ್ಕವನಿಗೆ ದೊಡ್ಡವರು ನಮಸ್ಕರಿಸುವುದು ಯೋಗ್ಯವಲ್ಲ. ಈಗ ನೀವು ಹಿರಿಯರು ನನಗೆ ಪ್ರತ್ಯಕ್ಷ ವಾಗಿ ನಮಸ್ಕರಿಸಿದಿರಿ. ಹಿರಿಯರಾದ ನೀವು ಚಿಕ್ಕವನಾದ ನನಗೆ ನಮಸ್ಕಾರ ಮಾಡಿದ್ದರಿಂದ ನಾನು ಸನ್ಯಾಸವನ್ನು ಸ್ವೀಕರಿಸುವುದಕ್ಕೆ ನೀವಾಗಿಯೇ ಆಜ್ಞೆಯನ್ನು ಕೊಟ್ಟಂತೆ ಆಯಿತು." ಎಂದು ಜಾಣತನದಿಂದ ಉತ್ತರ ವಿತ್ತನು. ಮಗನ ಈ ಚಾತುರ್ಯದ ಮಾತಿಗೆ ಬೆರಗಾಗಿ, ನಿರುತ್ತರರಾಗಿ ಈ ತಂದೆತಾಯಿಗಳು ಸುಮ್ಮನೆ ಮನೆಗೆ ತಿರುಗಿ ಬಂದರು. ಅದರೇನು? ಇವರಿಗೆ ಮಗನ ವಿರಹ ತಾಪವು ಮತ್ತಷ್ಟು ಹೆಚ್ಚಾಯಿತು. ಇವರಿಬ್ಬರೂ ಅನ್ನ ನೀರುಗಳನ್ನು ಬಿಟ್ಟು, ನಿದ್ರೆಯಿಲ್ಲದೆ ಆ ಮಗನ ಮುಖ ಚಂದ್ರನನ್ನೇ ಸ್ಮರಿಸುತ್ತ ಈ ದಂಪತಿಗಳು ಶೋಕದಲ್ಲಿ ಮುಳುಗಿದರು. ಇವರಿಗೆ ಕ್ಷಣವು ಯುಗವಾಯಿತು! ಬೆಲ್ಲವು ಬೇವಾಯಿತು!! ಊಟವು ವಿಷವಾಯಿತು!!! ಮಗನ ವಿಯೋಗ ದುಃಖವನ್ನು ತಾಳಲಾರದೆ ಮಧ್ಯಗೇಹಭಟ್ಟರು ಪುನಃ ಆತನನ್ನು ಕರೆದುಕೊಂಡು ಬರುವದಕ್ಕೆ ಹೊರಟರು. ಈ ಸಮಯದಲ್ಲಿ ಆ ಅಚ್ಯುತಪ್ರೇಕ್ಷಯತಿವರ್ಯರು ಉಡುಪಿಯಲ್ಲಿ ಇರಲಿಲ್ಲ. ತುಳು ನಾಡಿನ ದಕ್ಷಿಣ ಭಾಗದಲ್ಲಿ ಶಿಷ್ಯಸಹಿತರಾಗಿ ಆ ಯತಿಶ್ರೇಷ್ಠರು ಯಾತ್ರೆ ಯನ್ನು ಮಾಡುತ್ತಿದ್ದರು. ಮಧ್ಯಗೇಹಭಟ್ಟರು ಸಿಟ್ಟಿನಿಂದ ಬರುತ್ತ ಅವ

ರನ್ನು ಹುಡುಕಲಾರಂಭಿಸಿದರು. ಉಡುಪಿಯಿಂದ ೪೦ ಮೈಲು ದಕ್ಷಿಣಕ್ಕೆ ಬಂದು, ಈಗಿನ ಮಂಗಳೂರ ಪಟ್ಟಣಕ್ಕೆ ಸಮೀಪದಲ್ಲಿ ನೇತ್ರಾವತಿಯೆಂಬ ದೊಡ್ಡ ನದಿಯನ್ನು ದಾಟಿ, ಕಾರ್ಯೂರು ( ಕಾರೇವೂರು ) ಎಂಬ ಶ್ರೇಷ್ಠವಾದ ಗ್ರಾಮದಲ್ಲಿರುವ **ಕುತ್ಯಾಡಿ**ಯೆಂಬ ಮಠದಲ್ಲಿ ಯತಿವರ್ಯರಾದ ಅಚ್ಯುತಪ್ರೇಕ್ಷ ತೀರ್ಥರನ್ನು ಸೇವಿಸುತ್ತಲಿರುವ ತಮ್ಮ ವಾಸುದೇವನನ್ನು ಕಂಡರು. ಮಗನನ್ನು ನೋಡಿದಾಕ್ಷಣವೇ ಬಹಳ ಕೋಪೋದ್ರೇಕದಿಂದ ಮಧ್ಯಗೇಹಭಟ್ಟರು ತಮ್ಮ ಆ ಸುತನ ಸಂಗಡ ವಾಗ್ವಾದವನ್ನು ಮಾಡಲು ಪ್ರಾರಂಭಿಸಿದರು. ಮಗನು ಕೌಪೀನವನ್ನುಟ್ಟರೆ, ಎಂದರೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದರೆ, ತಾನು ನಿಶ್ಚಯವಾಗಿ ಪ್ರಾಣತ್ಯಾಗವನ್ನಾದರೂ ಮಾಡುವೆನೆಂದು ಆ ಭಟ್ಟರು ಶಪಥದ ಮಾತನ್ನಾಡಿದರು. ಆಗ ವಾಸುದೇವನು ಕ್ಷಣಮಾತ್ರದಲ್ಲಿ ತನ್ನ ವಸ್ತ್ರವನ್ನು ಹರಿಸು, ಕೌಪೀನವನ್ನುಟ್ಟು, "ಅಪ್ಪಾ! ನೀವು ಶಪಥ ಮಾಡಿದಂತೆ ಮಾಡಿಬಿಡಿರಿ " ಎಂದು ಹೇಳಿ, ಮುಂದೆ ಸ್ವಲ್ಪ ಹೊತ್ತಿನಲ್ಲಿ ತಂದೆಯುವರಿಗೆ ಶಾಂತವೃತ್ತಿಯುಂಟಾದ ಮೇಲೆ ಅವರನ್ನು ಕುರಿತು:- " ಅಪ್ಪಾ! ಈ ಶುಭ ಕಾರ್ಯಕ್ಕೆ ಎಂದರೆ ಉತ್ತಮಾಶ್ರಮವನ್ನು ಸ್ವೀಕಾರ ಮಾಡುವುದಕ್ಕೆ ತಾವು ಪ್ರತಿಬಂಧಕ ಮಾಡುವುದು ಉಚಿತವಲ್ಲ." ಎಂದು ವಿನಯದಿಂದ ಹೇಳಿದನು. ಈ ಮಾತಿಗೆ ಮಧ್ಯಗೇಹಭಟ್ಟರು ಹೀಗೆ ಸಮಾಧಾನವನ್ನು ಹೇಳಿದರು:— " ಎಲೈ ಮಗನೇ ! ತಂದೆತಾಯಿಗಳನ್ನು ರಕ್ಷಿಸುವುದರ ಹೊರತು ಬೇರೆ ಶುಭ ಕಾರ್ಯವೇ ಮಕ್ಕಳಿಗೆ ಇಲ್ಲವೆಂದು ಸಜ್ಜನರು ಹೇಳುತ್ತಾರೆ. ನಿನ್ನ ಅಣ್ಣಂದಿರಿಬ್ಬರು ಈ ಮೊದಲೇ ತೀರಿಕೊಂಡರು. ನೀನೂ ನಮ್ಮನ್ನು ಬಿಟ್ಟು ಹೋಗಿ ಸನ್ಯಾಸಿಯಾದರೆ, ಮುದುಕರಾದ ನಮ್ಮನ್ನು ಕಾಪಾಡುವವರೇ ಇಲ್ಲದಂತೆ ಆಗುವುದು. ವಿಚಾರ ಮಾಡಿ ನೋಡು. " ಈ ಪ್ರಕಾರ ತಂದೆಯು ಹೇಳಿದಾಕ್ಷಣವೇ ವಿವೇಕ ಪರಿಪೂರ್ಣನಾದ ವಾಸುದೇವನು ತಂದೆಯನ್ನು ಕುರಿತು:— " ಅಪ್ಪಾ! ನೀವು ಹೇಳಿದ ಮಾತನ್ನು ನಾನು ಒಪ್ಪತಕ್ಕದ್ದಾಗಿದೆ. ಆದರೆ ಮನುಷ್ಯನು ಯಾವಾಗ ವೈರಾಗ್ಯವಂತನಾಗುವನೋ, ಆಗಲೇ ಸನ್ಯಾಸವನ್ನು ಸ್ವೀಕರಿಸತಕ್ಕದ್ದೆಂದು ವೇದವು ಸಾರುತ್ತಿದೆ. ಹೀಗಿದ್ದರೂ ಮತ್ತು ನಾನು ವಿಷಯಗಳಲ್ಲಿ ಆಸಕ್ತಿಯನ್ನು ಬಿಟ್ಟಿದ್ದರೂ ಕೂಡ ನಿಮ್ಮನ್ನು ರಕ್ಷಿಸುವ ಇನ್ನೊಬ್ಬ

ಮಗನು ನಿಮಗೆ ಹುಟ್ಟುವವರೆಗೆ ನಾನು ಸನ್ಯಾಸಾಶ್ರಮವನ್ನು ಸ್ವೀಕರಿಸು ವುದಿಲ್ಲ." ಎಂದು ವಚನವನ್ನು ಕೊಟ್ಟು, ತನ್ನ ಪಿತೃಭಕ್ತಿಯನ್ನು ವ್ಯಕ್ತ ಪಡಿಸಿದನು. ಆಗ ಮಧ್ಯಗೇಹಭಟ್ಟರು—"ಅಪ್ಪಾ! ಮುದ್ದು ಮಗನೇ! ನಾನು ಅನೇಕ ಶಾಸ್ತ್ರಗಳನ್ನು ಬಲ್ಲವನಾದುದರಿಂದ ಧೈರ್ಯ ಮಾಡಿ, ನಿನ್ನ ವಿರಹವನ್ನು ಸಹಿಸಿಕೊಂಡೇನು; ಆದರೆ ನಿನ್ನ ಹಡೆದ ತಾಯಿಯು ನಿನ್ನ ವಿರಹವನ್ನೆಂದಿಗೂ ಸಹಿಸಲಾರಳು." ಎಂದು ನುಡಿಯಲು; "ಅಪ್ಪಾ! ನೀನು ಅಪ್ಪಣೆ ಕೊಡು." ಎಂದು ಬೇಡಿಕೊಳ್ಳುತ್ತ ಆ ವಾಸುದೇವನು ತಂದೆಗೆ ನಮಸ್ಕರಿಸಿದನು. ಆ ಕಾಲಕ್ಕೆ ಪಂಡಿತರಾದ ಈ ಭಟ್ಟರು ಹೀಗೆ ಮಗನ ಮಾತಿನಿಂದ ನಿರುತ್ತರರಾಗಿ, "ಮಗನೇ! ನಿನ್ನ ತಾಯಿಯೊಪ್ಪಿದರೆ ಮಾತ್ರ ಹಾಗೆಯೇ ಆಗಲಿ." ಎಂದು ಅವನಿಗೆ ಹೇಳಿ, ಬಹು ಕಷ್ಟದಿಂದ ಮನೆಗೆ ಬಂದು, ಆ ವೃತ್ತಾಂತವನ್ನೆಲ್ಲ ಹೆಂಡತಿಗೆ ಹೇಳಿದರು.

ಇತ್ತ ವಾಸುದೇವನು ತನ್ನ ಗುರುಗಳಾದ ಶ್ರೀ ಅಚ್ಯುತಪ್ರೇಕ್ಷ ತೀರ್ಥರವರ ಸೇವೆಯಲ್ಲಿ ಮಗ್ನನಾದನು. ಹೀಗೆ ಕೆಲವು ಕಾಲವು ಕಳೆಯು ತ್ತಿರಲು, ಅತ್ತ ಪಾಜಕ ಗ್ರಾಮದಲ್ಲಿ ಶ್ರೀಹರಿಯ ಕೃಪೆಯಿಂದ ಮಧ್ಯಗೇಹ ಭಟ್ಟರ ಧರ್ಮಪತ್ನಿಯು ಗರ್ಭವನ್ನು ಧರಿಸಿದಳು. ಮುಂದೆ ಕ್ರಮೇಣ ನವಮಾಸಗಳು ತುಂಬಲು, ಆ ಸಾಧ್ವಿಯಾದ ವೇದವತಿಯು ಇನ್ನೊಬ್ಬ ಸುಪುತ್ರನನ್ನು ಹಡೆದಳು. ಈ ಸುದ್ದಿಯನ್ನು ಕೇಳಿ, ವಾಸು ದೇವನು ತನ್ನ ತಮ್ಮನು ಹುಟ್ಟಿದನೆಂದು ಸಂತುಷ್ಟನಾಗಿ, ತನ್ನ ಕೋರಿ ಕೆಯು ಇನ್ನು ಈಡೇರುವುದೆಂದು ನೆರೆನಂಬಿ, ತಾಯಿಯವರನ್ನು ಕುರಿತು ನಮಸ್ಕರಿಸಿ ಪ್ರಾರ್ಥಿಸಿ ಅವರ ಅಪ್ಪಣೆಯನ್ನು ಪಡೆಯುವುದಕ್ಕೋಸ್ಕರ ಮನೆಗೆ ಬಂದನು. ಆ ಕಾಲಕ್ಕೆ ತಾಯಿಗೂ ಮಗನಿಗೂ ನಡೆದ ಪರಸ್ಪರ ಸಂವಾದವನ್ನು ವಾಚಕರೇ ಊಹಿಸಬಹುದು. ತಾಯಿಯ ಪ್ರೇಮವು ಹೆಚ್ಚಿನದು; ಅವರ್ಣನೀಯವಾದದ್ದು! ಸಾಮಾನ್ಯತಃ ಮನುಷ್ಯರಲ್ಲಿ ಇಷ್ಟೇ ಅಲ್ಲ ಮನುಷ್ಯೇತರ ಪ್ರಾಣಿಗಳಲ್ಲಿ ಸಹ ಮಕ್ಕಳೆಂಬುದು ತಾಯಿಗೆ ಪ್ರಾಣ ಕ್ಕಿಂತಲೂ ಪ್ರಿಯವಾದದ್ದು. ಅದರಲ್ಲಿಯೂ ವಾಸುದೇವನೆಂದರೆ ಸಾಮಾನ್ಯ ಮಗನೇ? ಈ ಮಗನೆಂದರೆ ಲೋಕೋತ್ತರನಾದ ಮಗನು! ಮನ್ಮಥನಂತೆ ಸುಂದರನು; ಬೃಹಸ್ಪತಿಯಂತೆ ವಿಶಾಲ ಮೇಧಾವಿಯು. ಇಂಥ ದಿವ್ಯ

ಮಂಗಳಾಂಗನಿಗೆ ವಿವಾಹ ಮಹೋತ್ಸವವನ್ನು ಜರುಗಿಸಿ, ಕನ್ಯಾರತ್ನ ದೊಡನೆ ಮಗನನ್ನು ಹಸೆಯ ಮೇಲೆ ಕುಳ್ಳಿರಿಸಿ, ಆ ಮದುಮಕ್ಕಳಿಗೆ ಹಾಡುಗಳಿಂದಾಶೀರ್ವದಿಸಿ ಧನ್ಯಳಾಗುವುದನ್ನು ಬಿಟ್ಟು, ಬೋಳನಾಗಿ ಕಂಥೆಯನ್ನುಟ್ಟು, ಕಠಿಣ ವ್ರತದಲ್ಲಿ ದೀಕ್ಷಿತನಾಗಿ, ಉಪವಾಸಗಳನ್ನು ಮಾಡಿ, ಬೆಂದು ಬೆಂಡಾಗಿ ಕೃಶನಾದ ಮಗನನ್ನು ನೋಡುವ ಹೊತ್ತು ಬಂದಿತಲ್ಲಾ !! ಎಂದು ಬಹು ಪರಿಯಿಂದ ಮರುಗಿದಳು ಆದರೆ ಮಗನು ಪರಮವಿರಕ್ತನಾಗಿ, ಸಂಸಾರ ಸುಖದಲ್ಲಿ ಲೇಶಮಾತ್ರವೂ ಇಚ್ಛೆಯನ್ನು ವ್ಯಕ್ತಪಡಿಸದೆ ಪುನಃ ಪುನಃ ತಾಯಿತಂದೆಗಳಿಗೆ ನಮಸ್ಕರಿಸಿ, ಪ್ರಾರ್ಥಿಸಿ ಹೇಳಿದ್ದೇನೆಂದರೆ:–"ತಾಯಿತಂದೆಗಳಿರಾ! ಈಗ ಹುಟ್ಟಿದಂಥ ನನ್ನ ತಮ್ಮನೇ ನಿಮ್ಮನ್ನು ಸಂರಕ್ಷಿಸುತ್ತಾನಾದ್ದರಿಂದ ಇನ್ನು ಮೇಲಾದರೂ ನಾನು ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಒಪ್ಪಿಗೆಯನ್ನು ಕೊಡಿರಿ." ಈ ಮಾತಿಗೂ ತಾಯಿಯು ಒಪ್ಪದಿರಲು, ಆಗ ಸನ್ಯಾಸಾಶ್ರಮವನ್ನು ತೆಗೆದು ಕೊಂಡೇ ಬಿಟ್ಟೇನೆಂದು ಮೊದಲಿನಿಂದಲೂ ದೃಢ ಪ್ರತಿಜ್ಞೆಯನ್ನು ಮಾಡಿ ದಂಥ ಹಾಗೂ ಇದಕ್ಕೋಸ್ಕರ ಇದುವರೆಗೆ ಭಗೀರಥ ಪ್ರಯತ್ನವನ್ನು ಮಾಡಿದಂಥ ಧೀರೋದಾತ್ತನಾದ ಈ ಬಾಲಕನು ತಾಯಿಯನ್ನು ಕುರಿತು ನಿರ್ದಾಕ್ಷಿಣ್ಯದಿಂದ ಹೀಗೆ ಹೇಳಿದನು:—"ಅವ್ವಾ! ಯಾವಾಗಲಾದರೂ ನನ್ನನ್ನು ನೋಡಬೇಕೆಂದು ನೀನು ಅಪೇಕ್ಷಿಸುವಿಯಾದರೆ, ಉತ್ತಮವಾದ ಸನ್ಯಾಸಾಶ್ರಮವನ್ನು ಸ್ವೀಕರಿಸಲು ನನಗೆ ಒಪ್ಪಿಗೆಯನ್ನು ಕೊಡು. ಹೀಗೆ ಒಪ್ಪಿಗೆಯನ್ನು ಕೊಡದಿದ್ದರೆ, ನಾನು ಈ ದೇಶವನ್ನೇ ಬಿಟ್ಟು, ಎಂದೆಂದಿಗೂ ನಿನ್ನ ಕಣ್ಣಿಗೇನೇ ಕಾಣಿಸದಂತೆ ಹೋಗುವೆನು." ಈ ಪ್ರಕಾರ ಮಗನು ತನ್ನ ಈ ಘೋರ ಪ್ರತಿಜ್ಞೆಯನ್ನು ಹೇಳಲು, "ಎಂದೆಂದಿಗೂ ಮಗನನ್ನು ನೋಡದಿರುವಂತೆ ಆಗುವುದೆಂದರೆ, ಅದು ಮರಣಕ್ಕೆ ಸಮಾನವಾದುದೇ ಸರಿ." ಎಂದು ಆಲೋಚಿಸಿ, ಸ್ವಾಭಾವಿಕವಾಗಿಯೇ ಶುಭಕರ್ಮಗಳಲ್ಲಿ ಆಸಕ್ತಳಾದ ಆ ಭಟ್ಟ ಪತ್ನಿಯು, ಪುತ್ರ ವಿಯೋಗಕ್ಕೆ ಹೆದರಿದವಳಾಗಿದ್ದರೂ ಬಹಳ ಕಷ್ಟನಿಂದ ಮಗನು ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಅಂತೂ ಒಮ್ಮೆ ಆ ಸುಪುತ್ರನಿಗೆ ಒಪ್ಪಿಗೆಯನ್ನು ಕೊಟ್ಟುಬಿಟ್ಟಳು !!! ಈ ಶುಭ ವಾರ್ತೆಯು ಹಾ, ಹಾ, ಅನ್ನುವುದರೊಳಗೆ ಕ್ಷಣಮಾತ್ರದಲ್ಲಿ ಎಲ್ಲರ

ಕಿವಿಗೂ ಹೋಗಿ ಮುಟ್ಟಿತು! ಎಲ್ಲರೂ ಆಶ್ಚರ್ಯಚಕಿತರಾದರು. !! ಆ ಕಾಲಕ್ಕೆ ಎಲ್ಲರೂ ಅದ್ವೈತ ಮತಾನುಯಾಯಿಗಳಾದುದರಿಂದ ಪ್ರತಿಯೊಬ್ಬ ಬ್ರಾಹ್ಮಣನ ಮುಖದಿಂದ:– " ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ವಿಶ್ವ ಪ್ರಯತ್ನ ಮಾಡಿ, ತಾಯಿತಂದೆಗಳಿಂದ ಆಜ್ಞೆಯನ್ನು ಪಡೆದಂಥ ಈ ವೀರ ವೈರಾಗ್ಯಶಾಲಿಯಾದ ವಾಸುದೇವನು ಸಾಮಾನ್ಯ ಬಾಲಕನಲ್ಲ! ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಅವತರಿಸಿದಂಥ, ಶೃಂಗೇರಿ ಮಠದ ಆದ್ಯ ಜಗದ್ಗುರುಗಳಾದಂಥ ಶ್ರೀ ಸುರೇಶ್ವರಾಚಾರ್ಯರೇ ಈ ವಾಸುದೇವನ ರೂಪದಿಂದ ಪುನಃ ಕಾಣ್ವಶಾಖೆಯಲ್ಲಿಯೇ[೧] ಅವತರಿಸಿ ಬಂದಿದ್ದಾರೆ!!" ಎಂಬ ಉದ್ಗಾರಗಳು ಹೊರಟವೆಂಬುದನ್ನು ವ್ಯಂಗ್ಯೋಕ್ತಿಯಿಂದ ಹೇಳುವುದಕ್ಕಾಗಿಯೇ ಸುಮಧ್ವವಿಜಯಕಾರರು ಈ ಸಮಯವನ್ನು ನಿರೂಪಿಸುವಾಗ್ಗೆ, ಈ ವಾಸುದೇವನನ್ನು **"ಜಗದ್ಗುರುಃ ಸುರೇಶ್ವರಃ"** ಎಂದು ಕಂಠೋಕ್ತವಾಗಿ ಹೀಗೆ ಸಂಬೋಧಿಸಿದ್ದಾರೆ —

ಅಥೋಪಗಮ್ಯೈಷ ಗುರುಂ **ಜಗದ್ಗುರುಃ** ಪ್ರಸಾದ್ಯ ತಂ ದೇವವರ-
-ಪ್ರಸಾದಿತಃ ।
ಸದಾ ಸಮಸ್ತಾಶ್ರಮಭಾಕ್ **ಸುರೇಶ್ವರೋ** ವಿಶೇಷತಃ ಖಲ್ವ-
-ಭಜದ್ವರಾಶ್ರಮಮ್ ॥

( ಸುಮಧ್ವವಿಜಯ ೪-೩೦ )

ಅರ್ಥ — ತಾಯಿಯ ಅಪ್ಪಣೆಯನ್ನು ಪಡೆದುಕೊಂಡ ಬಳಿಕ ದೇವತಾನುಗ್ರಹಕ್ಕೆ ಪಾತ್ರನಾದಂಥ ಜಗದ್ಗುರುವಾದ ಆ ಸುರೇಶ್ವರನು (ಎಂದರೆ ವಾಸುದೇವನು) ತನ್ನ ಗುರುಗಳಾದ ಅಚ್ಯುತಪ್ರೇಕ್ಷರ ಬಳಿಗೆ ಬಂದು, ಸೇವಿಸಿ **ಅವರನ್ನು ಸಂತೋಷಪಡಿಸಿ** – ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಪ್ರಭೃತಿ ಸಮಸ್ತ ಆಶ್ರಮಗಳನ್ನು ಆಚರಿಸುವುದಕ್ಕೆ ಆತನು ಯಾವಾಗಲೂ ಸಮರ್ಥನಾಗಿದ್ದರೂ ಕೂಡ ಈ ಆಶ್ರಮಗಳಲ್ಲಿ ಅತ್ಯಂತ ಶ್ರೇಷ್ಠವಾದಂಥ ಸನ್ಯಾಸಾಶ್ರಮವನ್ನು ಸ್ವೀಕರಿಸಿದನು.

ಸನ್ಯಾಸವನ್ನು ಸ್ವೀಕರಿಸುವ ಕಾಲಕ್ಕೆ ಮಾಡಬೇಕಾದ ಜೀವಚ್ಛ್ರಾದ್ಧ ಮೊದಲಾದ ಎಲ್ಲ ಕರ್ಮಕಲಾಪಗಳನ್ನೂ ಯಥಾವಿಧಿಯಾಗಿ ಮಾಡಿ,

---

೧ ಶ್ರೀ ಸುರೇಶ್ವರಾಚಾರ್ಯರು ಬ್ರಹ್ಮ ದೇವರ ಅವತಾರವೆಂದು ಶಂಕರ ದಿಗ್ವಿಜಯ ಗ್ರಂಥದಲ್ಲಿಯೂ ಶೃಂಗೇರಿ ಮಠಾಮ್ನಾಯ ಸ್ತೋತ್ರದಲ್ಲಿಯೂ ವರ್ಣಿತರಾಗಿದ್ದಾರೆ.

"ಸರ್ವ ವಸ್ತುಗಳನ್ನೂ ಶ್ರೀಹರಿಗೆ ಸಮರ್ಪಿಸಿದೆನು." ಎಂದು ನುಡಿದು, ವಾಸುದೇವನು ಅಚ್ಯುತಪ್ರೇಕ್ಷಾಚಾರ್ಯರ ಗುರುಗಳಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಪರಮಹಂಸ ಪರಿವ್ರಾಜಕಾಚಾರ್ಯನಾಗಿ "**ಪೂರ್ಣಪ್ರಜ್ಞ**" ಎಂಬ ನಾಮಧೇಯವನ್ನು ಪಡೆದನು.

ಅದ್ವೈತ ಮತಾನುಯಾಯಿಗಳಾದ ಅಚ್ಯುತ ಪ್ರೇಕ್ಷಾಚಾರ್ಯರು, ಅದ್ವೈತ ಮತಸ್ಥರಲ್ಲಿ ಅವತರಿಸಿದವನೂ ತಮ್ಮ ಶಿಷ್ಯನೂ ಆದ ಪೂರ್ಣಪ್ರಜ್ಞಾಚಾರ್ಯನಿಗೆ "**ಇಷ್ಟಸಿದ್ಧಿ**" ಎಂಬ ಅದ್ವೈತ ಮತಗ್ರಂಥವನ್ನು ೧ ಪಾಠ ಹೇಳಲುಪಕ್ರಮಿಸಿದರು. ಇದು ಕ್ರಮಪ್ರಾಪ್ತವೇ ಸರಿ. ಆದರೆ! ಪೂರ್ಣ ಪ್ರಜ್ಞಾಚಾರ್ಯರು ಅದ್ವೈತ ಮತಾನುಯಾಯಿಗಳ ಮನೆತನದಲ್ಲಿ ಅವತರಿಸಿದ್ದರೂ ಸ್ವತಃ ತಾವು ಅದ್ವೈತ ಮತಾನುಯಾಯಿಗಳಾಗಿದ್ದಿಲ್ಲ! ದ್ವೈತಮತಸ್ಥರಾಗಿದ್ದರು. ಕಿಂಬಹುನಾ ದ್ವೈತಮತೋದ್ಧಾರಕ್ಕೋಸ್ಕರವಾಗಿಯೇ ಇವರು ಅವತರಿಸಿದ್ದರು. ಅತಏವ ಅಚ್ಯುತ ಪ್ರೇಕ್ಷಾಚಾರ್ಯರು ಇಷ್ಟಸಿದ್ಧಿಯೆಂಬ ಈ ಅದ್ವೈತ ಮತಗ್ರಂಥದ ಪ್ರಥಮ ಶ್ಲೋಕದ ಅರ್ಥವನ್ನು ವಿಶದ ಮಾಡಿ ಹೇಳಲು, ಪೂರ್ಣಪ್ರಜ್ಞಾಚಾರ್ಯರು ಆ ಗ್ರಂಥದ ಆದಿಯಲ್ಲಿರುವ ಈ ಮಂಗಲಾಚರಣ ಶ್ಲೋಕದಲ್ಲಿಯೇ ಮೂವತ್ತೆರಡು ದೋಷಗಳನ್ನು ತೋರಿಸಿದರು! ಅಚ್ಯುತಪ್ರೇಕ್ಷಾಚಾರ್ಯರು ಅದ್ವೈತ ಸಿದ್ಧಾಂತದಲ್ಲಿ ನಿಷ್ಣಾತರಾಗಿದ್ದರೂ "ಎಲೈ ಪೂರ್ಣಪ್ರಜ್ಞನೇ! ನಿನಗೆ ಪಾಠ ಹೇಳುವ ಸಾಮರ್ಥ್ಯವು ನನಗೆ ಇಲ್ಲ." ಎಂದು ಸಿಟ್ಟಿನಿಂದ ಉತ್ತರ ಕೊಟ್ಟರು.

ಶ್ರೀ ಪೂರ್ಣಪ್ರಜ್ಞಾಚಾರ್ಯರು (ಎಂದರೆ ಶ್ರೀ ಮಧ್ವಾಚಾರ್ಯರು) ಮುಂದೆ ಕಾಲಾಂತರದಿಂದ ತಮ್ಮ ಗುರುಗಳಾದ ಈ ಅಚ್ಯುತಪ್ರೇಕ್ಷರಿಗೂ ತಂದೆಯವರಾದ ಮಧ್ಯಗೇಹಭಟ್ಟರಿಗೂ ಹಾಗೂ ಪೂಗವನ ಶಾಸ್ತ್ರಿ ಪ್ರಭೃತಿ

೧ ಈ ಇಷ್ಟಸಿದ್ಧಿಯೆಂಬ ಅದ್ವೈತ ಮತಗ್ರಂಥವು, ಶ್ರೀ ಸುರೇಶ್ವರಾಚಾರ್ಯರು ಬ್ರಹ್ಮಸಿದ್ಧಿ ಮತ್ತು ನೈಷ್ಕರ್ಮ್ಯಸಿದ್ಧಿ ಎಂಬೆರಡು ಅದ್ವೈತ ಮತಗ್ರಂಥಗಳನ್ನು ರಚಿಸಿದ ತರುವಾಯ ಕ್ರಿ. ವ. ೧೦೫೦ರಿಂದ ೧೧೦೦ ವರೆಗಿನ ಮಧ್ಯಕಾಲದಲ್ಲಿ ರಚಿಸಲ್ಪಟ್ಟಿರುತ್ತದೆಂದು ಶ್ರೀಮಾನ್ ಸಿ. ಹಯವದನ ರಾವ ಬಿ. ಎ., ಬಿ. ಎಲ್. ಇವರು ಕ್ರಿ. ವ. ೧೯೩೪ನೆಯ ಜನವರಿ ತಿಂಗಳ ಬೆಂಗಳೂರ ಮಿಥಿಕ್ ಸೊಸೈಟಿಯ ತ್ರೈಮಾಸಿಕ ಪತ್ರಿಕೆಯಲ್ಲಿ ಸಿದ್ಧ ಮಾಡಿರುತ್ತಾರೆ.

ಸ್ವಕೀಯ ಪಂಡಿತರಿಗೂ ಬ್ರಹ್ಮಸೂತ್ರ ಭಾಷ್ಯವಾಕ್ಯಾರ್ಥಗಳನ್ನು ಕುರಿತು ಉಪನ್ಯಾಸವನ್ನು ಹೇಳಿ, ಇವರ ಮನಸ್ಸನ್ನು ಕ್ರಮೇಣ ಪರಿಪಕ್ವ ಮಾಡಿ, ಇವರೆಲ್ಲರನ್ನು ದ್ವೈತಮತಸ್ಥರನ್ನಾಗಿ ಮಾಡಿದರು.

---

# ೬ನೆಯ ಅಧ್ಯಾಯ

## ಬಾಲಯತಿವರರಾದ ಶ್ರೀ ಪೂರ್ಣಪ್ರಜ್ಞರು ಮಾಡಿದ ಮಹತ್ವದ ಕಾರ್ಯಗಳು.

ಗೃಹಸ್ಥಾಶ್ರಮದವರಂತೆ ಸನ್ಯಾಸಿಯು ಯಾವುದೊಂದು ಸ್ಥಳದಲ್ಲಿ ಬಹು ಕಾಲ ವಾಸ ಮಾಡಬಾರದೆಂಬ ಶಾಸ್ತ್ರ ನಿಯಮಕ್ಕನುಸರಿಸಿ, ಕಾಶೀ ಕ್ಷೇತ್ರಕ್ಕೆ ಪ್ರಯಾಣ ಮಾಡಬೇಕೆಂದು ಈ ಬಾಲ ಯತಿಗಳು ಗುರುಗಳ ಅನುಜ್ಞೆಯನ್ನು ಬೇಡಿದರು. ಇಂಥ ಶಿಷ್ಯೋತ್ತಮನನ್ನು ಇಷ್ಟು ಚಿಕ್ಕ ವಯಸ್ಸಿನಲ್ಲಿ ಪರಮ ದುರ್ಘಟವಾದ ಕಾಶೀ ಯಾತ್ರೆಗೆ ಏಕಾಕಿಯಾಗಿ ಕಳು ಹಿಸುವುದಕ್ಕೆ ಅಚ್ಯುತಪ್ರೇಕ್ಷಾಚಾರ್ಯರ ಮನಸ್ಸು ಒಪ್ಪಲಿಲ್ಲ. ಆದುದ ರಿಂದ ಕಾಶೀ ಯಾತ್ರೆಗೆ ಹೋಗುವುದಕ್ಕೆ ಶಿಷ್ಯನಿಗೆ ಅಪ್ಪಣೆಯನ್ನು ಕೊಡ ಲಿಲ್ಲ. ಅರ್ಥಾತ್ ಗುರುಗಳ ಆಜ್ಞೆಯನ್ನು ಮೀರದೆ ಶ್ರೀ ಪೂರ್ಣಪ್ರಜ್ಞಾ ಚಾರ್ಯರು ಸದ್ಯಕ್ಕೆ ಕಾಶೀಪ್ರಯಾಣವನ್ನು ನಿಲ್ಲಿಸಿದರು. ದೇಶ ದೇಶ ಗಳಲ್ಲಿ ಈ ಪೂರ್ಣಪ್ರಜ್ಞಾಚಾರ್ಯರ ತೇಜಸ್ವಿಯಾದ ಚರಿತ್ರವು ಪ್ರಸಿದ್ಧ ವಾಗಲು, ಪಂಡಿತರೂ ಪಾಮರರೂ ಇವರ ದರ್ಶನಕ್ಕೆ ಪ್ರವಾಹದಂತೆ ಬರ ಲಾರಂಭಿಸಿದರು.

ನ್ಯಾಯಶಾಸ್ತ್ರದಲ್ಲಿ ನಿಪುಣರು, ಅದ್ವೈತ ವೇದಾನ್ತ ಪಾರಂಗತರು, ಹಾಗೂ ಬೌದ್ಧ ಧರ್ಮದಲ್ಲಿ ನಿಷ್ಣಾತರು ಪ್ರಭೃತಿ ನಾನಾ ತರದ ಪಂಡಿತರು ಈ ಪೂರ್ಣಪ್ರಜ್ಞಾಚಾರ್ಯರ ಪಾಂಡಿತ್ಯವನ್ನು ಕೇಳಿ, ಇವರ ಸಂಗಡ ವಾದಮಾಡುವುದಕ್ಕೆ ಉದ್ಯುಕ್ತರಾದರು. ಈ ಆಚಾರ್ಯರು ಸನ್ಯಾ ಸಾಶ್ರಮವನ್ನು ಸ್ವೀಕರಿಸಿ, ೪೦ ದಿವಸಗಳು ಕಳೆಯಲು, ತರ್ಕಶಾಸ್ತ್ರ ಶಿರೋಮಣಿಯಾದ ವಾಸುದೇವನೆಂಬ ಪಂಡಿತನು ಶಿಷ್ಯ ಪರಿವಾರದೊಡನೆ ಬಂದು, ಶ್ರೀಮದಾಚಾರ್ಯರ ಸಂಗಡ ವಾದವನ್ನು ಮಾಡಿದನು. ಆಗ

ಆಚಾರ್ಯರು ನಿರಾಯಾಸದಿಂದ ಆ ವಾಸುದೇವಪಂಡಿತನನ್ನೂ ಆತನ ಶಿಷ್ಯರನ್ನೂ ಗೆದ್ದು, ಅವರಿಂದ ಜಯಪತ್ರವನ್ನು ಪಡೆದರು.

ಒಂದಾನೊಂದು ದಿವಸ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರ ಸನ್ನಿಧಾನದಲ್ಲಿ ಭಾಗವತ ಪುರಾಣವನ್ನು ಕೇಳಲು ಕೂಡಿರುವ ಐದಾರು ಮಂದಿ ಶಿಷ್ಯರು, ತಮ್ಮ ತಮ್ಮ ಭಾಗವತ ಪುಸ್ತಕಗಳಲ್ಲಿರುವ ಅನೇಕ ಪಾಠ ಭೇದಗಳನ್ನೋದುತ್ತಿರಲು, ವಿಶಾಲ ಮೇಧಾವಿಗಳಾದ ಈ ಪೂರ್ಣಪ್ರಜ್ಞಾಚಾರ್ಯರು ಆ ಪಾಠ ವೈಚಿತ್ರ್ಯದಲ್ಲಿ ಒಂದನ್ನು ಅನುಸರಿಸಿ, ಇದೇ ವೇದ ವ್ಯಾಸರಿಗೆ ಅಭಿಮತವಾದ ಪಾಠವೆಂದು ಸಪ್ರಮಾಣವಾಗಿಯೂ ಸಯುಕ್ತಿಕ ವಾಗಿಯೂ ಸಿದ್ಧ ಮಾಡಿ ತೋರಿಸಿದರು. ಶ್ರೀಮದಾಚಾರ್ಯರ ಈ ಪಾಂಡಿತ್ಯವನ್ನು ನೋಡಿ, ಅಚ್ಯುತಪ್ರೇಕ್ಷಾಚಾರ್ಯರೂ ಮತ್ತು ಇತರ ಜನರೂ ಆಶ್ಚರ್ಯಚಕಿತರಾದರು. ಈ ಪ್ರಕಾರ ಆಶ್ಚರ್ಯದಿಂದಲೂ ಆನಂದದಿಂದಲೂ ಯತಿಶ್ರೇಷ್ಠರಾದ ಅಚ್ಯುತಪ್ರೇಕ್ಷರು:— "ಭಾಗವತದ ೫ನೆಯ ಸ್ಕಂಧ ದಲ್ಲಿಯ ಗದ್ಯವನ್ನು ಶ್ರೀವೇದವ್ಯಾಸರಿಗೆ ಸಮ್ಮತವಾದ ಅರ್ಥಮಾಡಿ ಹೇಳು." ಎಂದು ತಮ್ಮ ಶಿಷ್ಯಂದಿರಾದ ಈ ಪೂರ್ಣಪ್ರಜ್ಞಾಚಾರ್ಯರಿಗೆ ಆಜ್ಞಾಪಿಸಲು, ಇವರು ಅದೇ ಪ್ರಕಾರವಾಗಿ ಈ ಗದ್ಯಕ್ಕೆ ಅರ್ಥ ಮಾಡಿ ಹೇಳಿದರು. ಇವರ ಈ ವಿದ್ವತ್ತೆಯನ್ನು ನೋಡಿ, ಅಚ್ಯುತಪ್ರೇಕ್ಷಾಚಾರ್ಯರು ಬಹು ಸಂತೋಷ ಬಟ್ಟು, ವೇದಾಂತವಿದ್ಯೆಯೆಂಬ ಸಾಮ್ರಾಜ್ಯದ ಪರಿ ಪಾಲನ ಕಾರ್ಯದಲ್ಲಿ ಈ ಪೂರ್ಣಪ್ರಜ್ಞಾಚಾರ್ಯನೇ ಸಮರ್ಥನೆಂದು ತಿಳಿದು, ಈ ಶಿಷ್ಯೋತ್ತಮನಿಗೆ, ಶಂಖದಲ್ಲಿ ತುಂಬಿದ ಶುದ್ಧ ಜಲದಿಂದ ಅಭಿ ಷೇಕ ಮಾಡಿ, **"ಆನಂದ ತೀರ್ಥ"** ಎಂಬ ಅರ್ಥ ಪೂರ್ಣವಾದ ನಾಮ ವನ್ನು ಕೊಟ್ಟು, ಈ ಬಾಲ ಯತಿವರ್ಯರನ್ನು ಯುವರಾಜ ಸ್ಥಾನಾರೂಢ ರನ್ನಾಗಿ ಮಾಡಿದರು. ಆನಂದತೀರ್ಥರೆಂದರೆ, ಆನಂದರೂಪವಾದ ಮೋಕ್ಷ ವನ್ನು ಕೊಡುವ ಸುಶಾಸ್ತ್ರವನ್ನು ರಚನೆ ಮಾಡಿದವರು, ಎಂದು ಇತ್ಯರ್ಥ. 'ಮಧ್ವ' ಎಂಬ ಶಬ್ದವೂ ಸಹ ಈ 'ಆನಂದತೀರ್ಥ' ಎಂಬುದರ ಪರ್ಯಾಯ ಪದವಾಗಿದೆ. ಅದು ಹೇಗೆಂದರೆ, 'ಮಧು' ಎಂದರೆ ಆನಂದ; 'ವ' ಎಂದರೆ ಶಾಸ್ತ್ರ. ಮಧ್ವಾಚಾರ್ಯರೆಂದರೆ ಆನಂದರೂಪವಾದ ಮುಕ್ತಿಯನ್ನು ಕೊಡುವ ಸುಶಾಸ್ತ್ರವನ್ನು ರಚಿಸಿದ ಆಚಾರ್ಯರು, ಎಂದು ಇತ್ಯರ್ಥ.

ಇನ್ನು ಮುಂದೆ ಈ ಶ್ರೀಮದಾಚಾರ್ಯರ ಮಠದಲ್ಲಿ ವಾಕ್ಯಾರ್ಥ ವಿಚಾರವು ಪ್ರಾರಂಭವಾಯಿತು. ಒಂದಾನೊಂದು ದಿವಸ ಅಚ್ಯುತಪ್ರೇಕ್ಷರ ಸ್ನೇಹಿತರಾದ ಸನ್ಯಾಸಿಗಳೊಬ್ಬರು ಅನೇಕ ಜನ ಶಿಷ್ಯರೊಡನೆ ರೂಪ್ಯಪೀಠ ದಲ್ಲಿರುವ ಅಚ್ಯುತಪ್ರೇಕ್ಷರ ಬಳಿಗೆ ಬಂದರು. ಈ ಸನ್ಯಾಸಿಗಳು ತರ್ಕ ಶಾಸ್ತ್ರದಲ್ಲಿ ನಿಷ್ಣಾತರಾಗಿದ್ದು, ಪಂಡಿತರಾದ ಶಿಷ್ಯವರ್ಗದೊಡನೆ ಬಂದಿ ದ್ದರು. ಈ ತರ್ಕಶಾಸ್ತ್ರಜ್ಞರ ಮನಸ್ಸಿನಲ್ಲಿ ಈ ಪೂರ್ಣಪ್ರಜ್ಞಾಚಾರ್ಯ ರನ್ನು ಜಯಿಸಿ, ಕೀರ್ತಿಯನ್ನು ಪಡೆಯಬೇಕೆಂದು ಅಪೇಕ್ಷೆಯಿತ್ತು. ಆದರೆ ಶ್ರೀಮದಾಚಾರ್ಯರು— "ಯಾವುದನ್ನು ಸಿದ್ಧಾಂತ ಮಾಡುವುದಕ್ಕೂ ಅನುಮಾನಪ್ರಮಾಣವೊಂದು ಮಾತ್ರವೇ ಪ್ರಯೋಜನಕರವಾದುದಲ್ಲ. ಪ್ರತ್ಯಕ್ಷ ಪ್ರಮಾಣವಾಗಲಿ ಆಗಮಪ್ರಮಾಣವಾಗಲಿ ಅನುಮಾನಕ್ಕೆ ಬೆಂಬಲವಾಗಿದ್ದರೆ ಮಾತ್ರವೇ ಆ ಅನುಮಾನವು ಅರ್ಥ ಸಾಧಕ ಪ್ರಮಾಣ ವಾಗುವುದು, ಆತಏವ ಪ್ರತ್ಯಕ್ಷಾಗಮೋಪಜೀವಿತವಾಗದೆ ಇರುವ ಯುಕ್ತಿಯು ಕುಯುಕ್ತಿಯು." ಎಂದು ಪ್ರತಿಪಾದಿಸಿ, ಆ ತಾರ್ಕಿಕರೆಲ್ಲ ರನ್ನೂ ಗೆದ್ದು, **"ಅನುಮಾನತೀರ್ಥ"** ಎಂಬ ಹೆಸರನ್ನು ಪಡೆದರು. ಎಂದರೆ ಈ ಆನಂದತೀರ್ಥರ ವಾಗ್ವಿಲಾಸವನ್ನೂ ಅನುಮಾನ ಶಾಸ್ತ್ರ ಪಾಂಡಿ ತ್ಯವನ್ನೂ ನೋಡಿ, ಜನರು ಇವರನ್ನು "ಅನುಮಾನತೀರ್ಥ" ಎಂಬ ಅನ್ವ ರ್ಥಕವಾದ ಹೆಸರಿನಿಂದ ಸಂಬೋಧಿಸಲಾರಂಭಿಸಿದರು.

ಈ ಪ್ರಕಾರ ಸರ್ವಶಾಸ್ತ್ರ ವಿಶಾರದರಾದ ಶ್ರೀಮದಾನಂದತೀರ್ಥರ ಕೀರ್ತಿಯು ಎಲ್ಲ ಕಡೆಗೂ ಹಬ್ಬಲು, ದೊಡ್ಡದೊಡ್ಡ ಪಂಡಿತರು ದೂರ ದೂರ ದೇಶಗಳಿಂದ ವಾದಕ್ಕೋಸ್ಕರ ಇವರ ಕಡೆಗೆ ಬರಲಾರಂಭಿಸಿದರು. ವೇದ ದ್ವೇಷಿಗಳಾದ ಬೌದ್ಧರಲ್ಲಿ ಅತ್ಯಂತ ಪ್ರಮುಖ ಪಂಡಿತರಾದ ವಾದಿಸಿಂಹ, ಬುದ್ಧಿಸಾಗರ ಎಂಬುವರಿಬ್ಬರು ಬಹಳ ಪ್ರಬಲರಾಗಿ ಸಕಲ ವಾದಿಗಳನ್ನೂ ಜಯಿಸಿ, "ನಮ್ಮ ಸಂಗಡ ವಾದ ಮಾಡಿ ನಮ್ಮನ್ನು ಸೋಲಿಸುವ ಧೀರನು ಈ ಪೃಥ್ವಿಯಲ್ಲಿ ಯಾವನಾದರೂ ಇದ್ದಾನೋ?" ಎಂದು ಗರ್ಜಿಸುತ್ತ ಭೂಸಂಚಾರ ಮಾಡಿಕೊಂಡು, ರಜತಪೀಠಪುರಕ್ಕೆ ಅಚ್ಯುತಪ್ರೇಕ್ಷಾಚಾ ರ್ಯರ ಬಳಿಗೆ ಬಂದರು. ಮತ್ತು ವಾದ ಮಾಡುವುದಕ್ಕೆ ಆಹ್ವಾನವನ್ನು ಮಾಡಿದರು.

ಯುವರಾಜ್ಯಾಭಿಷೇಕವಾದಂದಿನಿಂದ ಶ್ರೀಮದಾನಂದತೀರ್ಥರು ಸ್ವಶಿಷ್ಯರೊಡನೆ ಸ್ವತಂತ್ರವಾದ ಬೇರೊಂದು ಮಠದಲ್ಲಿ ಇರಲಾರಂಭಿಸಿದ್ದರು. ಆದುದರಿಂದ ಅಚ್ಯುತಪ್ರೇಕ್ಷರು, ಈ ಮದಾಂಧರಾದ ವಾದಿಸಿಂಹ, ಬುದ್ಧಿಸಾಗರ ಪಂಡಿತರನ್ನು ಗೆಲ್ಲುವುದಕ್ಕಾಗಿ ತಮ್ಮ ಶಿಷ್ಯರಾದ ಆನಂದ ತೀರ್ಥರನ್ನು ಆ ಮಠದಿಂದ ತಮ್ಮ ಬಳಿಗೆ ಬೇಗನೆ ಕರೆಸಿಕೊಂಡರು. ಆಗ ಶ್ರೀಮದಾನಂದ ತೀರ್ಥರು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೆ ನಮಸ್ಕರಿಸಿ ಸಭೆಯಲ್ಲಿ ಕುಳಿತುಕೊಳ್ಳಲು, ಆ ವಾದಿಸಿಂಹನೆಂಬ ಪಂಡಿತನು ಪೂರ್ವಪಕ್ಷಮಾಡಿದನು. ಕೂಡಲೇ ಆನಂದತೀರ್ಥರು ಅದನ್ನು ಸ್ವಲ್ಪದರಲ್ಲಿಯೇ ಸಪ್ರಮಾಣವಾಗಿ ಖಂಡಿಸಿದರು. ಈ ಪ್ರಕಾರ ಮಧ್ವಾಚಾರ್ಯರು ಆ ವಾದಿಸಿಂಹನ ವಚನವನ್ನು ಖಂಡಿಸಿದ ಮೇಲೆ ಆತನು ಈ ಆಚಾರ್ಯರ ಉತ್ಕರ್ಷವನ್ನು ಸಹಿಸಲಾರದೆ, ಒಂದು ವಿಷಯವನ್ನು ಹದಿನೆಂಟು ಪ್ರಕಾರವಾಗಿ ಗಟ್ಟಿಯಾದ ಸ್ವರದಿಂದ ಪ್ರತಿಪಾದಿಸಿ, ಉಪನ್ಯಾಸವನ್ನು ಹೇಳಿದನು. ಆಗ ಅಲ್ಲಿ ಕೂಡಿದ ಜನರು, "ಈ ಮಧ್ವಾಚಾರ್ಯರು ಜಗತ್ತನ್ನೇ ಜಯಿಸಲು ಸಮರ್ಥರಾಗಿದ್ದರೂ ಇಂತಹ ವಾದಿಸಿಂಹನನ್ನು ಹೇಗೆ ಗೆದ್ದಾರೆ"ಂದು ಸಂಶಯಪಟ್ಟರು. ಆದರೆ ದಿಗ್ವಿಜಯ ಪಂಡಿತರಾದ ಶ್ರೀಮದಾನಂದತೀರ್ಥರು ವಾಗ್ಬಾಣಗಳನ್ನು ಪ್ರಯೋಗಿಸಿ, ನಿಮಿಷ ಮಾತ್ರದಲ್ಲಿ ಈ ವಾದಿಸಿಂಹನ ಯುಕ್ತ್ಯಾಭಾಸಗಳನ್ನು ಖಂಡಿಸಿದರು. ಇದೇ ಮೇರೆಗೆ ಆ ಬುದ್ಧಿಸಾಗರ ಪಂಡಿತನನ್ನೂ ಸಹ ಅನಾಯಾಸದಿಂದ ಗೆದ್ದರು. ಈ ಪ್ರಕಾರ ಇವರಿಬ್ಬರೂ ನಿರುತ್ತರರಾಗಿ ಮರುದಿವಸ ಉತ್ತರ ಕೊಡುತ್ತೇವೆಂದು ನುಡಿದು, ಆ ಸಭೆಯಿಂದ ಹೊರಟು, ಈ ಶ್ರೀಮದಾಚಾರ್ಯರ ಸಂಗಡ ವಾದ ಮಾಡಿ ಜಯವನ್ನು ಹೊಂದುವುದು ಅಶಕ್ಯವೆಂದು ತಿಳಿದು, ಆ ದಿನ ರಾತ್ರಿಯಲ್ಲಿ ಹೇಳದೆ ಕೇಳದೆ ನಿಶ್ಶಬ್ದವಾಗಿ ಓಡಿ ಹೋದರು !

ಈ ಪ್ರಕಾರ ಶ್ರೀಮದಾಚಾರ್ಯರು ದೊಡ್ಡ ದೊಡ್ಡ ಪಂಡಿತರನ್ನು ಸೋಲಿಸಿ, ತಮ್ಮ ಪಾಂಡಿತ್ಯವನ್ನು ವ್ಯಕ್ತಪಡಿಸುತ್ತಿದ್ದಾಗ, ಬ್ರಾಹ್ಮಣ ಸಮಾಜದಲ್ಲಿ ಎತ್ತ ನೋಡಿದತ್ತ ಅದ್ವೈತ ಮತಾನುಯಾಯಿಗಳೇ ದೃಷ್ಟಿಗೋಚರವಾಗುತ್ತಿದ್ದರು. ಇಷ್ಟೇ ಅಲ್ಲ ಸ್ವತಃ ಶ್ರೀಮದಾಚಾರ್ಯರ

ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರೂ, ತಂದೆಯವರಾದ ಮಧ್ಯ ಗೇಹಭಟ್ಟರೂ ಹಾಗೂ ಅಧ್ಯಾಪಕರಾದ ಪೂಗವನಶಾಸ್ತ್ರಿಗಳೂ ಅದ್ವೈತ ಮತಾನುಯಾಯಿಗಳಾಗಿದ್ದರು ! ಇಂತಹ ಸಮಯದಲ್ಲಿ ಈ ಶ್ರೀಮದಾಚಾರ್ಯರು, ಶ್ರೀಶಂಕರಾಚಾರ್ಯರು ರಚಿಸಿದ ಬ್ರಹ್ಮ ಸೂತ್ರ ಭಾಷ್ಯವನ್ನು ಸಪ್ರಮಾಣವಾಗಿ ಖಂಡಿಸಿದರು. ಇದನ್ನು ಕೇಳಿ, ಆ ಸಭೆಯಲ್ಲಿ ಕುಳಿತ ಅದ್ವೈತಮತಾನುಯಾಯಿಗಳೆಲ್ಲರೂ ಅತ್ಯಂತ ಆಶ್ಚರ್ಯಚಕಿತರಾದರು. ಆಗ ಆ ಸಭಿಕರು ಶ್ರೀಮದಾನಂದತೀರ್ಥರನ್ನು ಕುರಿತು— "ನೀವು ಶಾಂಕರಭಾಷ್ಯವನ್ನು ನಿರಾಕರಿಸುತ್ತೀರಿ; ಆದ್ದರಿಂದ ಆ ಬ್ರಹ್ಮಸೂತ್ರಕ್ಕೆ ಯೋಗ್ಯವಾದ ಅರ್ಥವನ್ನು ನೀವೇ ಹೇಳಿರಿ." ಎಂದು ಕೇಳಿದರು. ಆ ಕ್ಷಣವೇ ಶ್ರೀಮದಾಚಾರ್ಯರು ದ್ವೈತ ಸಿದ್ಧಾಂತಕ್ಕನು ಸರಿಸಿ ಬ್ರಹ್ಮಸೂತ್ರಾರ್ಥದ ಉಪನ್ಯಾಸವನ್ನು ಉಚ್ಚಸ್ವರದಿಂದ ಹೇಳಿದರು. ಈ ವೇಳೆಯಲ್ಲಿ ಅದ್ವೈತ ಮತಾಭಿಮಾನಿಗಳಾದ ಅಚ್ಯುತಪ್ರೇಕ್ಷಾಚಾರ್ಯರು ಸುಮ್ಮನೆ ಹೇಗೆ ಕುಳಿತುಕೊಳ್ಳುವರು ? ಕೂಡಲೇ ಈ ಗುರುಗಳು ಶಿಷ್ಯ ನನ್ನು ಕುರಿತು- "ಆನಂದತೀರ್ಥನೇ ! ನೀನು ಬ್ರಹ್ಮಸೂತ್ರಾರ್ಥವನ್ನು ಚೆನ್ನಾಗಿ ತಿಳಿದುಕೊಂಡಿದ್ದರೆ, ಈ ಬ್ರಹ್ಮಸೂತ್ರಗ್ರಂಥಕ್ಕೆ ಭಾಷ್ಯವನ್ನು ರಚಿಸು." ಎಂದು ಆಕ್ಷೇಪಯುಕ್ತ ಸ್ವರದಿಂದ ಆಜ್ಞಾಪಿಸಿದರು. ಹಂಸ ಪಕ್ಷಿಯು ನೀರನ್ನು ಬೆರಸಿದ ಹಾಲಿನಲ್ಲಿ ಕೇವಲ ಹಾಲನ್ನು ಮಾತ್ರವೇ ಕುಡಿಯುವಂತೆ ಪರಮಹಂಸ ಯತಿಶ್ರೇಷ್ಠರಾದ ಶ್ರೀಮದಾನಂದತೀರ್ಥರು "ಭಾಷ್ಯವನ್ನು ರಚಿಸು" ಎಂಬ ಗುರುಗಳ ಅಪ್ಪಣೆಯನ್ನು ಮಾತ್ರವೇ ಸ್ವೀಕರಿಸಿದರು. ಎಂದರೆ ಗುರುಗಳ ಆಜ್ಞಾನುಸಾರವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸುವೆನೆಂದು ಸಂಕಲ್ಪವನ್ನು ಮಾಡಿದರು. ಇದೇ ಪ್ರಕಾರ ಈ ಅಚ್ಯುತಪ್ರೇಕ್ಷರ ಇನ್ನೊಬ್ಬ ಶಿಷ್ಯರಾದ ಜ್ಯೇಷ್ಠಯತಿಗಳ ಸೂಚನೆ ಯಂತೆ ಶ್ರೀಮದಾಚಾರ್ಯರು ಬ್ರಹ್ಮಸೂತ್ರಗಳ ಅರ್ಥವನ್ನು ಉಪದೇಶ ಮಾಡಿದರು. ಈ ರೀತಿ ಮಧ್ವಾಚಾರ್ಯರು ಉಪನ್ಯಾಸ ಹೇಳುವ ಕಾಲದಲ್ಲಿ ಮಧ್ಯಗೇಹಭಟ್ಟರು ಮಠಕ್ಕೆ ಬಂದು, ಮಗನ ತೇಜಸ್ವಿತೆಯನ್ನೂ, ವಾಗ್ವಿ ಲಾಸವನ್ನೂ ಪಾಂಡಿತ್ಯವನ್ನೂ ನೋಡಿ ಬೆರಗಾಗಿ, ಆನಂದಾಶ್ರುಗಳನ್ನು ಸುರಿಸುತ್ತ ರೋಮಾಂಚಿತ ಗಾತ್ರರಾಗಿ ಸಂತೋಷಭರಿತರಾಗುತ್ತಿದ್ದರು.

# ೭ನೆಯ ಅಧ್ಯಾಯ

——:O:——

## ಶ್ರೀ ಮಧ್ವಾಚಾರ್ಯರ ದಕ್ಷಿಣ ದೇಶ ದಿಗ್ವಿಜಯವು.

ಒಂದಾನೊಂದು ಸಮಯದಲ್ಲಿ ಶ್ರೀ ಮಧ್ವಾಚಾರ್ಯರು ದಕ್ಷಿಣ ದೇಶದ ಪಂಡಿತರನ್ನು ಜಯಿಸಬೇಕೆಂದು ಅಚ್ಯುತಪ್ರೇಕ್ಷಾಚಾರ್ಯರಿಂದ ಕೂಡಿಕೊಂಡು, [೧] ವಿಷ್ಣುಮಂಗಳವೆಂಬ ಸ್ಥಳಕ್ಕೆ ಹೋಗಿ, ಆ ದೇವಾಲಯ ದಲ್ಲಿದ್ದ ಶ್ರೀನಾರಾಯಣ ದೇವರಿಗೆ ನಮಸ್ಕಾರ ಮಾಡಿದರು. ಶ್ರೀಮದಾ ಚಾರ್ಯರು ಸಂಚಾರಕ್ಕೆ ಹೊರಟಿರುವುದು ಇದೇ ಮೊದಲನೆಯ ಸಾರೆ; ಮಹಾತ್ಮರು ದೇಶಸಂಚಾರ ಮಾಡುವುದು ಲೋಕ ಕಲ್ಯಾಣಕ್ಕಾಗಿಯೇ. ಪ್ರತಿಯೊಂದು ಸ್ಥಳದಲ್ಲಿ ಪಂಡಿತರಿಗೂ ಪಾಮರರಿಗೂ ದರ್ಶನವನ್ನು ಕೊಟ್ಟು, ತಮ್ಮ ಲೋಕೋತ್ತರವಾದ ಬುದ್ಧಿಸಾಮರ್ಥ್ಯವನ್ನೂ ದೇಹಸಾಮರ್ಥ್ಯ ವನ್ನೂ ಮೇಲಿಂದ ಮೇಲೆ ವ್ಯಕ್ತಪಡಿಸಿ, ತಮ್ಮ ಕಡೆಗೆ ಜನರ ಮನಸ್ಸನ್ನು ಆಕರ್ಷಿಸಿಕೊಂಡು, ಅವರಿಗೆ ಸದುಪದೇಶ ಮಾಡಿ, ಅವರ ಹೃದಯದಲ್ಲಿ ಮೋಕ್ಷದಾಯಕವಾದ ಸಿದ್ಧಾಂತಗಳನ್ನು ನೆಲೆಗೊಳಿಸಿ, ಅವರನ್ನು ಉದ್ಧಾರ ಮಾಡುವುದೇ ಮಹಾ ಪುರುಷರ ಇತಿಕರ್ತವ್ಯವಾಗಿದೆ.

ಆ ವಿಷ್ಣುಮಂಗಳ ಗ್ರಾಮದಲ್ಲಿ ಭಿಕ್ಷೆಮಾಡಿಸಿದ ಯಜಮಾನನು, ಶ್ರೀ ಮಧ್ವಾಚಾರ್ಯರು ಲೋಕೋತ್ತರವಾದ ಭೋಜನ ಶಕ್ತಿಯುಳ್ಳವ ರೆಂಬ ಪ್ರಸಿದ್ಧಿಯನ್ನು ಕಣ್ಣಾರೆ ಪರೀಕ್ಷಿಸುವುದಕ್ಕಾಗಿ ಭಿಕ್ಷೆಯಾದಕೂಡಲೇ ಎರಡು ನೂರಕ್ಕಿಂತಲೂ ಹೆಚ್ಚು ದೊಡ್ಡ ರಸಬಾಳೆ ಹಣ್ಣುಗಳನ್ನು ತಂದು ಕೊಡಲು ಶ್ರೀಮದಾಚಾರ್ಯರು ಆಯಾಸವಿಲ್ಲದೆ ಆ ಹಣ್ಣುಗಳನ್ನೆಲ್ಲ ತಿಂದುಬಿಟ್ಟರು! ಇದನ್ನು ನೋಡಿ, ಆಶ್ಚರ್ಯಚಕಿತರಾಗಿ ಅಚ್ಯುತಪ್ರೇಕ್ಷಾ

---

೧ ವಿಷ್ಣುಮಂಗಳವೆಂಬ ಸ್ಥಳವು, ಈಗಿನ ದಕ್ಷಿಣಕನ್ನಡ ಜಿಲ್ಲೆಯ ಕಾಸರಗೋಡ ತಾಲೂಕಿನಲ್ಲಿ ಕುಂಬಳೆ ಗ್ರಾಮದ ಬಳಿಯಲ್ಲಿದೆ. ಈ ಕುಂಬಳೆ ಗ್ರಾಮವು ಆಗಿನ ಕಾಲದಲ್ಲಿ ಜಯಸಿಂಹ ರಾಜನ ರಾಜಧಾನಿಯಾಗಿತ್ತು.

ಚಾರ್ಯರು ಮಧ್ವಾಚಾರ್ಯರನ್ನು ಕುರಿತು:—"ಭಿಕ್ಷೆಯ (ಭೋಜನದ) ಅನಂತರದಲ್ಲಿ ಎರಡು ನೂರರಿಂದಲೂ ಹೆಚ್ಚಾಗಿರುವ ದೊಡ್ಡ ಬಾಳೆ ಹಣ್ಣುಗಳನ್ನು ತಿಂದರೂ ನಿನಗೆ ಹೊಟ್ಟೆನೋವು ಮುಂತಾದ ಬೇನೆಯು ಏಕೆ ಉಂಟಾಗಲಿಲ್ಲ?" ಎಂದು ಕೇಳಿದರು. ಈ ಪ್ರಶ್ನೆಗೆ ಮಧ್ವಾಚಾರ್ಯರು ಉತ್ತರ ಹೇಳಿದ್ದೇನೆಂದರೆ:— "ಗುರುಗಳೇ! ಸಾಮಾನ್ಯ ಜನರ ಜಠರಾಗ್ನಿಗಿಂತಲೂ ನನ್ನ ಹೊಟ್ಟೆಯಲ್ಲಿರುವ ಜಠರಾಗ್ನಿಯು ಅತ್ಯಂತ ಪ್ರಜ್ವಲಿತವಾಗಿದೆ."

ಈ ಪ್ರಕಾರ ಭೋಜನಸಾಧಿಕ್ಯದಿಂದ ತಮ್ಮ ಮಾಹಾತ್ಮ್ಯವನ್ನು ಪ್ರಕಟಿಸಿ, ಶ್ರೀ ಮಧ್ವಾಚಾರ್ಯರು ವಿಷ್ಣುಮಂಗಳದಿಂದ ಹೊರಟು, ಸಣ್ಣ ದೊಡ್ಡ ಅನೇಕ ನದಿಗಳಿಂದ ಯುಕ್ತವಾದಂಥ ಹಾಗೂ ದೇಶೋಚಿತವಾದ ನಾನಾ ತರದ ವಸ್ತುಗಳಿಂದ ತುಂಬಿದಂಥ ಅನೇಕ ದೇಶಗಳನ್ನು ದಾಟುತ್ತ, ಆಯಾಯ ದೇಶಗಳಲ್ಲಿ ಸಭೆಗೆ ಬಂದ ಪಂಡಿತರ ಮತಸಿದ್ಧಾಂತಗಳನ್ನು ನಿರಾಕರಿಸುತ್ತ ಮುಂದೆ ದಕ್ಷಿಣಕ್ಕೆ ಪ್ರಯಾಣ ಮಾಡಿದರು. ಆಗ ಮಾರ್ಗದಲ್ಲಿ ಕೇರಳ ದೇಶವು ಬರಲು, ಅಲ್ಲಿರುವ ಪಯಸ್ವಿನೀ ನದಿಯ ತೀರದಲ್ಲಿ ದುರ್ಗಾದೇವಿಯನ್ನು ಸ್ಮರಿಸಿ, ಆ ನದಿಯನ್ನು ದಾಟಿ, ಅಲ್ಲಿಂದ ಮುಂದೆ ಪ್ರಯಾಣ ಮಾಡಿ ಅನಂತಶಯನ ಕ್ಷೇತ್ರಕ್ಕೆ ಹೋದರು. ಮತ್ತು ಈ ಕ್ಷೇತ್ರದಲ್ಲಿರುವ ಶೇಷಶಾಯಿಯಾದ ಶ್ರೀಮದನಂತಪದ್ಮನಾಭದೇವರನ್ನು ವಂದಿಸಿದರು. ಆ ಬಳಿಕ ಶ್ರೀಮದಾಚಾರ್ಯರು ತಮ್ಮ ಶಿಷ್ಯರಿಗೆ ದ್ವೈತ ಸಿದ್ಧಾಂತಕ್ಕನುಸರಿಸಿ, ಬ್ರಹ್ಮಸೂತ್ರಗಳ ಅರ್ಥವನ್ನು ಉಪದೇಶಮಾಡಲಾರಂಭಿಸಿದರು. ಆ ಕಾಲಕ್ಕೆ ಅಲ್ಲಿಗೆ ಬಂದಿದ್ದ ಶೃಂಗೇರಿ ಮಠದ ಜಗದ್ಗುರುಗಳಾದ ಶ್ರೀವಿದ್ಯಾಶಂಕರ ಸ್ವಾಮಿಗಳು ಶ್ರೀಮನ್ಮಧ್ವಾಚಾರ್ಯರನ್ನು ಕುರಿತು:- "ತಾವು ಭಾಷ್ಯಕಾರರಲ್ಲ; ಆದ್ದರಿಂದ ಮೊದಲಿನ ಪ್ರಸಿದ್ಧ ಬ್ರಹ್ಮಸೂತ್ರ ಭಾಷ್ಯವನ್ನು ಬಿಟ್ಟು, ಬ್ರಹ್ಮಸೂತ್ರಗಳಿಗೆ ತಮಗೆ ತೋರಿದಂತೆ ಅರ್ಥ ಹೇಳುವುದು ಸಂಪ್ರದಾಯ ವಿರುದ್ಧವೆಂ"ದು ಹೇಳಿದರು. ಆ ಮಾತಿಗೆ ಶ್ರೀಮದಾಚಾರ್ಯರು—"ನಾವು ಹೇಳಿದ ಸೂತ್ರಾರ್ಥ ವಿಷಯದಲ್ಲಿ ಅದನ್ನು ನಿರಾಕರಿಸುವ ಉತ್ತರವು ನಿಮಗೆ ತೋರಿದರೆ ಹೇಳಿರಿ. ನಾವೂ ಸಹ ಬ್ರಹ್ಮಸೂತ್ರಭಾಷ್ಯವನ್ನು ಮಾಡೇ ಮಾಡುವೆವು. ಭಾಷ್ಯವನ್ನು

ಮಾಡುವುದಕ್ಕೆ ಪ್ರತಿಬಂಧ ಮಾಡುವವರು ಯಾರು ?" ಎಂದು ಉತ್ತರ ಕೊಡಲು ಆ ಶ್ರೀ ವಿದ್ಯಾಶಂಕರಸ್ವಾಮಿಗಳವರು ನಿರುತ್ತರರಾದರು; ಹಾಗೂ ಅಲ್ಲಿ ಕೂಡಿರುವ ಸಮಸ್ತ ಜನರೂ ಶ್ರೀಮನ್ಮಧ್ವಾಚಾರ್ಯರ ಈ ಮಾತನ್ನು ಅಭಿನಂದಿಸಿದರು.

ಆ ಬಳಿಕ ಶ್ರೀ ಮಧ್ವಾಚಾರ್ಯರು ಆ ಅನಂತಶಯನ ಕ್ಷೇತ್ರದಲ್ಲಿರುವ ಪದ್ಮತೀರ್ಥಾದಿಗಳಲ್ಲಿ ಸ್ನಾನಮಾಡಿ, ಶೀಘ್ರವಾಗಿ ಕನ್ಯಾಕುಮಾರೀ ಕ್ಷೇತ್ರಕ್ಕೆ ಬಂದು, ಅಲ್ಲಿ ಕನ್ಯಾತೀರ್ಥದಲ್ಲಿ ಸ್ನಾನಮಾಡಿ, ಶ್ರೀರಾಮ ಚಂದ್ರದೇವರು ನಿರ್ಮಾಣ ಮಾಡಿಸಿದ ಸಮುದ್ರಸೇತುವಿನಲ್ಲಿ ಎಂದರೆ ಧನುಷ್ಕೋಟಿಯಲ್ಲಿ ಸ್ನಾನಮಾಡಿ, ಆ ರಾಮೇಶ್ವರಕ್ಷೇತ್ರದಲ್ಲಿರುವ ರಾಮೇಶ್ವರಲಿಂಗದಲ್ಲಿ ಅಂತರ್ಗತನಾಗಿರುವ ಶ್ರೀಹರಿಗೆ ನಮಸ್ಕಾರ ಮಾಡಿದರು. ತರುವಾಯ ಶ್ರೀಮದಾಚಾರ್ಯರು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಂದ ಕೂಡಿಕೊಂಡು, ಆ ರಾಮೇಶ್ವರ ಕ್ಷೇತ್ರ ದಲ್ಲಿಯೇ ಚಾತುರ್ಮಾಸ್ಯ ವ್ರತವನ್ನು ಆಚರಿಸುತ್ತ ನಾಲ್ಕು ತಿಂಗಳು ವಾಸ ಮಾಡಿದರು. ಆ ಕಾಲಕ್ಕೆ ಅಲ್ಲಿ ಆಗಾಗ್ಗೆ ಜರುಗುತ್ತಿರುವ ಪಂಡಿತ ಸಭೆಗಳಲ್ಲಿ ಶ್ರೀಮದಾನಂದತೀರ್ಥರು ಆ ಪಂಡಿತರನ್ನೆಲ್ಲ ಜಯಿಸಿದರು.

ಈ ಚಾತುರ್ಮಾಸ್ಯ ವ್ರತವು ಮುಗಿದ ಮೇಲೆ ಶ್ರೀಮದಾಚಾರ್ಯರು ರಾಮೇಶ್ವರದಿಂದ ಹೊರಟು, ಶ್ರೀರಂಗ ಕ್ಷೇತ್ರಕ್ಕೆ (ಎಂದರೆ ಶ್ರೀರಂಗ ಪಟ್ಟಣಕ್ಕೆ) ಬಂದು, ಕಾವೇರೀ ನದಿಯ ತಂಗಾಳಿಯಿಂದ ಸೇವಿತನಾದ ಹಾಗೂ ಶೇಷಶಾಯಿಯಾದ ಶ್ರೀರಂಗನಾಥ ದೇವರನ್ನು ನಮಸ್ಕರಿಸಿದರು. ತದನಂತರ ಶ್ರೀರಂಗ ಕ್ಷೇತ್ರದಿಂದ ಉತ್ತರ ದಿಕ್ಕಿಗೆ ಹೊರಟು, ಮಾರ್ಗದಲ್ಲಿದ್ದ ರುದ್ರ-ಷಣ್ಮುಖಾದಿ ದೇವಾಲಯಗಳಲ್ಲಿರುವ ರುದ್ರಾದಿಗಳಲ್ಲಿ ಅಂತರ್ಯಾಮಿಯಾದ ಶ್ರೀ ನಾರಾಯಣನನ್ನು ನಮಸ್ಕರಿಸುತ್ತ ಪುನಃ ಪಯಸ್ವಿನೀ ನದಿಯ ತೀರಕ್ಕೆ ಬಂದರು. ಶ್ರೀಮನ್ಮಧ್ವಾಚಾರ್ಯರ ಸನ್ನಿಧಾನದಲ್ಲಿ ಮಹಾ ವಿದ್ವತ್ಸಭೆಯು ಸೇರಿತು. ಈ ಸಭೆಗೆ ಕೇರಳ ದೇಶದ ಪಂಡಿತೋತ್ತಮರಾದ ಬ್ರಾಹ್ಮಣರೆಲ್ಲರೂ ಬಂದಿದ್ದರು. ಈ ಸಭೆಯಲ್ಲಿ ಒಬ್ಬ ಪಂಡಿತ ಶ್ರೇಷ್ಠನು ಐತರೇಯ ಬ್ರಾಹ್ಮಣ ದಲ್ಲಿಯ ಎಂದರೆ ಋಗ್ವೇದದಲ್ಲಿಯ ಒಂದು ಸೂಕ್ತವನ್ನು ಹೇಳಿ, ಇದರ ಅರ್ಥವೇನೆಂದು ಶ್ರೀಮದಾಚಾರ್ಯರನ್ನು ಕೇಳಿದನು. ಆಗ ಶ್ರೀ ಮಧ್ವಾ

ಚಾರ್ಯರು ಈ ಸೂಕ್ತದ ಅರ್ಥವನ್ನು ಹೇಳಿದರು. ಆ ಕ್ಷಣವೇ ಆ ಸಭಿಕರು ಮಧ್ವಾಚಾರ್ಯರು ಹೇಳಿದ ಅರ್ಥವು ಈ ಸೂಕ್ತಕ್ಕೆ ಸರಿಯಾದುದಲ್ಲ. ನಾವು ಹೇಳುವ ಅರ್ಥವೇ ಸರಿಯೆಂದು ಅವರು ಈ ಸೂಕ್ತಕ್ಕೆ ಬೇರೊಂದು ಅರ್ಥವನ್ನೇ ಹೇಳಿದರು. ಆಗ ಶ್ರೀಮನ್ಮಧ್ವಾಚಾರ್ಯರು ಹೇಳಿದ್ದೇನೆಂದರೆ:— "ಎಲೈ ಸಭಿಕರಿರಾ! ಈ ಋಗ್ವೇದ ಸೂಕ್ತಕ್ಕೆ ನಾವು ಹೇಳಿದಂತೆ ಅರ್ಥವೂ ಆಗುತ್ತದೆ; ನೀವು ಹೇಳಿದ ಅರ್ಥವೂ ಸರಿಯಾಗಿದೆ. ಸಕಲ ವೇದಗಳಿಗೂ ಮೂರು ಅರ್ಥಗಳಿವೆ; ಭಾರತಕ್ಕೆ ಹತ್ತು ಅರ್ಥಗಳಿವೆ; ವಿಷ್ಣುಸಹಸ್ರನಾಮದಲ್ಲಿ ಪ್ರತಿನಾಮಕ್ಕೂ ನೂರು ಅರ್ಥಗಳಿವೆ."

ಈ ಪ್ರಕಾರ ಶ್ರೀಮದಾನಂದತೀರ್ಥರು ಹೇಳಲು, ಅವರನ್ನು ಜಯಿಸಬೇಕೆಂದು ಈ ಸಭಿಕರು "ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥಗಳನ್ನು ಹೇಳಿರಿ." ಎಂದು ಶ್ರೀಮದಾಚಾರ್ಯರನ್ನು ಕೇಳಿದರು. ವಿಷ್ಣುಸಹಸ್ರನಾಮದ ಪ್ರತಿಯೊಂದು ನಾಮಕ್ಕೂ ನೂರು ಅರ್ಥಗಳುಂಟೆಂದು ಹೇಳುವುದಕ್ಕೆ ಸುಲಭ; ಆ ನೂರು ಅರ್ಥಗಳನ್ನು ನಿರೂಪಿಸುವುದು ಅಸಾಧ್ಯವೇ ಸರಿ. ನೂರು ಅರ್ಥಗಳನ್ನು ಹೇಳುವುದಕ್ಕೆ ಆರಂಭಿಸಿದರೆಂದರೆ ಖಂಡಿತವಾಗಿ ಆಚಾರ್ಯರು ಸೋಲುವರು, ಎಂದು ತಿಳಿದು ಹೀಗೆ ಕೇಳಿದರು. ಆಗ ಶ್ರೀಮದಾಚಾರ್ಯರು:– "ಎಲೈ ಬ್ರಾಹ್ಮಣರೇ! ನೂರು ಅರ್ಥಗಳನ್ನೂ ನಿಮಗೆ ನಾನು ಹೇಳುವೆನು; ನಾನು ಹೇಳಿದ್ದನ್ನೆಲ್ಲವನ್ನೂ ಜ್ಞಾಪಕದಲ್ಲಿಟ್ಟುಕೊಂಡು, ತಪ್ಪದೆ ಸರಿಯಾಗಿ ನೀವು ಅನುವಾದ ಮಾಡಿ ಹೇಳಬೇಕು." ಎಂದು ಹೇಳಲು, "ಹಾಗೇ ಆಗಲಿ, ನಾವು ಅನುವಾದ ಮಾಡುವೆವು." ಎಂದು ಆ ಸಭಿಕರು ನುಡಿಯಲು, ಆಚಾರ್ಯರು ವಿಷ್ಣುಸಹಸ್ರನಾಮದಲ್ಲಿಯ '**ವಿಶ್ವ**' ಎಂಬ ನಾಮಕ್ಕೆ ನೂರು ಅರ್ಥಗಳನ್ನು ಹೇಳಲುಪಕ್ರಮಿಸಿದರು.

ಶ್ರೀಮದಾಚಾರ್ಯರ ಮುಖದಿಂದ ಆ ವಿಶ್ವ ಶಬ್ದಾರ್ಥಗಳು ಗಂಗಾ ಪ್ರವಾಹದೋಪಾದಿಯಲ್ಲಿ ತಡೆಯಿಲ್ಲದೆ ಹೊರಡುತ್ತಿರಲು, ಆ ನೂರು ಅರ್ಥಗಳನ್ನು ತಿಳಿದುಕೊಳ್ಳುವಷ್ಟು ಆ ಸಭಿಕರು ಸಮರ್ಥರಾಗಲಿಲ್ಲ. ಆದುದರಿಂದಲೇ ಆ ಸಭಿಕರು ಸೋತು, ಆಚಾರ್ಯರಲ್ಲಿ ಕ್ಷಮೆಯನ್ನು ಹೀಗೆ

ಪ್ರಾರ್ಥಿಸಿದರು:— "ಶ್ರೀಮನ್ಮಧ್ವಾಚಾರ್ಯರೇ ! ನಿಮ್ಮ ಪ್ರತಿಭೆಯು ಅದ್ವಿತೀಯವಾದುದು. ನಮ್ಮ ತಪ್ಪನ್ನು ಕ್ಷಮಿಸಿರಿ; ನಿಮಗೆ ನಮಸ್ಕಾರವು." ಈ ರೀತಿ ಪ್ರಾರ್ಥಿಸಿ, ಆ ಸಭೆಯ ಪಂಡಿತರೆಲ್ಲರೂ ಶ್ರೀಮಧ್ವಾಚಾರ್ಯರಿಗೆ ನಮಸ್ಕಾರ ಮಾಡಿದರು.

ಇದೇ ಮೇರೆಗೆ ಮತ್ತೊಂದು ಸಭೆಯಲ್ಲಿ ಕೇರಳ ದೇಶದ ಬ್ರಾಹ್ಮಣರು, ಆಚಾರ್ಯರ ಸರ್ವವಿದ್ಯಾಪಾಂಡಿತ್ಯವನ್ನು ನೋಡಿ, ಬಹುಮಾನದಿಂದ ಈ ಮಹಾಭಾಗರ ಪಾದಾರವಿಂದಕ್ಕೆ ನಮಸ್ಕಾರ ಮಾಡಿದರು.

ಇಷ್ಟು ಮಾತ್ರವೇ ಅಲ್ಲ, ಶ್ರೀಮಧ್ವಾಚಾರ್ಯರು ಎಲ್ಲ ಸಭೆಗಳಲ್ಲಿಯೂ ತಮ್ಮ ಮಹಾ ಪ್ರತಿಭಾಶಕ್ತಿಯಿಂದ ಸಕಲ ವಿಷಯಗಳನ್ನೂ ತತ್ಕ್ಷಣದಲ್ಲಿಯೇ ಹೇಳುತ್ತಿದ್ದುದರಿಂದ ಆ ಪಂಡಿತಸಭೆಗಳಲ್ಲಿ ಇವರು '**ಸರ್ವಜ್ಞ**' ರೆಂದು ಪ್ರಸಿದ್ಧಿಯನ್ನು ಹೊಂದಿದರು. ಸಾರಾಂಶ, ಶ್ರೀಮದಾಚಾರ್ಯರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು.

ಈ ಪ್ರಕಾರ ದಕ್ಷಿಣದಿಗ್ವಿಜಯವನ್ನು ಮುಗಿಸಿ, ಶ್ರೀಮದಾನಂದ ತೀರ್ಥರು ರೂಪ್ಯಪೀಠಕ್ಕೆ (ಎಂದರೆ ಉಡುಪಿಗೆ) ಬಂದರು. ಒಟ್ಟಿನಮೇಲೆ ಶ್ರೀಮದಾಚಾರ್ಯರ ಮೊಟ್ಟಮೊದಲಿನ ಈ ವಿಜಯಯಾತ್ರೆಯು ಯಶಸ್ವಿಯಾಗಿ ಜರುಗಿತು.

# ೬ನೆಯ ಅಧ್ಯಾಯ



## ಶ್ರೀ ಮಧ್ವಾಚಾರ್ಯರ ಬದರಿಕಾಶ್ರಮದ ಪ್ರಥಮ ಯಾತ್ರೆಯು.

ಪ್ರಾಚೀನಕಾಲದಲ್ಲಿ ಭರತಖಂಡದ ಗುರುಕುಲಗಳು ಎಂದರೆ ವಿದ್ಯಾಪೀಠಗಳು ತಪೋವನದಲ್ಲಿ ಇರುತ್ತಿದ್ದವು. ಅಲ್ಲಿ ವಾಸಿಸುವ ಮಹರ್ಷಿಗಳ ಹೃದಯದಲ್ಲಿ ಆ ಅರಣ್ಯದ ನಿಸರ್ಗ-ಸೌಂದರ್ಯವು, ಉದಾತ್ತವಾದ ಭಾವನೆಯನ್ನುಂಟುಮಾಡುತ್ತಿದ್ದಿತು. ಪೂರ್ವಕಾಲೀನ ನೈಮಿಷಾರಣ್ಯವೂ ಬದರಿಕಾಶ್ರಮವೂ ದೊಡ್ಡ ವಿದ್ಯಾಪೀಠಗಳಾಗಿದ್ದವು. ಈ ಪವಿತ್ರವಾದ ವನಗಳಲ್ಲಿ ಮಹಾ ಮಹಾ ತಪೋನಿಧಿಗಳಾದ ಬ್ರಹ್ಮರ್ಷಿಗಳು ವಾಸಮಾಡುತ್ತಿದ್ದರು. [೧]ನೈಮಿಷಾರಣ್ಯವು, ನರ್ಮದಾನದಿಯ ಉತ್ತರಕ್ಕೆ ಕುರುದೇಶದ ಪಶ್ಚಿಮಕ್ಕೆ ಗೋಮತೀ ನದಿಯ ಬಳಿಯಲ್ಲಿ ಸೃಷ್ಟಿ-ಸೌಂದರ್ಯದಿಂದ ಶೋಭಿಸುತ್ತಿತ್ತು. ಈ ವನದಲ್ಲಿ ಸೌತಿಯು ಋಷಿಗಳಿಗೆ ಮಹಾಭಾರತವನ್ನು ಹೇಳಿದನು. ಇರಲಿ. ಇತ್ತ, ಬದರಿಕಾಶ್ರಮವು ಈಗಿನ ಸಂಯುಕ್ತ ಪ್ರಾಂತದಲ್ಲಿ ಗಢವಾಲ ಜಿಲ್ಹೆಯಲ್ಲಿ ಹರಿದ್ವಾರದಿಂದ ಈಶಾನ್ಯಕ್ಕೆ ೬೨ ಮೈಲುಗಳ ಮೇಲೆ ಮಧ್ಯಹಿಮಾಲಯದಲ್ಲಿದೆ. ಈ ಆಶ್ರಮವು, ಸಮುದ್ರ ಮಟ್ಟದಿಂದ ೨೩೨೧೦ ಅಡಿ ಎತ್ತರವಾಗಿದೆ. ಇಲ್ಲಿ ವಿಷ್ಣುಗಂಗಾ ನದಿಯು ಹರಿಯುತ್ತದೆ. ಇದಲ್ಲದೆ ನಾರದತೀರ್ಥ, ಕೂರ್ಮಧಾರಾತೀರ್ಥ ಮುಂತಾದ ತೀರ್ಥಗಳೂ ಬಿಸಿನೀರಿನ ಶಲೆಯುಳ್ಳ (ಎಂದರೆ ಉಗಮವುಳ್ಳ) ಅಗ್ನಿಕುಂಡವೆಂಬ ತೀರ್ಥವೂ ಇವೆ. ಇದಕ್ಕೂ ಮುಂದೆ ಸರಸ್ವತೀ ನದಿಯ ತೀರದಲ್ಲಿ "ವ್ಯಾಸಾಶ್ರಮ"ವು ಇದೆ. ಈ ಕ್ಷೇತ್ರವು "ಸುಂದರವಾದ ಕಮಲಗಳುಳ್ಳ ಸರೋವರಗಳಿಂದಲೂ, ಅರಳಿದ ಪುಷ್ಪಗಳಿಂದ ತುಂಬಿದ ವೃಕ್ಷಗಳಿಂದಲೂ ಹಾಗೂ ಸುವರ್ಣಕಾಂತಿ

---

೧ ಈ ಅರಣ್ಯದಲ್ಲಿ ಭಗವಂತನು ದೈತ್ಯರನ್ನು ಒಂದು ನಿಮಿಷದಲ್ಲಿ ಸಂಹಾರ ಮಾಡಿದ್ದರಿಂದ ಇದಕ್ಕೆ "ನೈಮಿಷಾರಣ್ಯ"ವೆಂಬ ಹೆಸರು ಪ್ರಾಪ್ತವಾಯಿತೆಂದು ಪುರಾಣದಲ್ಲಿ ಉಕ್ತವಾಗಿದೆ.

ಯಿಂದ ಶೋಭಿಸುವ ಕೋಡುಗಲ್ಲುಗಳಿಂದಲೂ, ಬ್ರಹ್ಮರ್ಷಿಗಳಿಂದಲೂ ಬಹು ಮನೋಹರವಾಗಿಯೂ ಗಂಭೀರವಾಗಿಯೂ ಕಂಗೊಳಿಸುತ್ತಿತ್ತು." ಎಂದು ಸುಮಧ್ವವಿಜಯದಲ್ಲಿ ವರ್ಣಿತವಾಗಿದೆ. ಈ ಆಶ್ರಮದಲ್ಲಿ ಭಗವಾನ್ ವ್ಯಾಸ ಮಹರ್ಷಿಗಳು ಬ್ರಹ್ಮಸೂತ್ರಗಳನ್ನೂ ಮಹಾಭಾರತ ಮುಂತಾದ ಇತಿಹಾಸ ಪುರಾಣಗಳನ್ನೂ ರಚಿಸಿದರು.

ಶ್ರೀಮನ್ಮಧ್ವಾಚಾರ್ಯರು, ಇಂತಹ ಪರಮಪವಿತ್ರವಾದ ಬದರಿಕಾಶ್ರಮದಲ್ಲಿ ವಾಸಿಸುತ್ತಿದ್ದಂಥ ಹಾಗೂ ಸ್ವಕಾಲೀನರಾದಂಥ ಬ್ರಹ್ಮರ್ಷಿಗಳೊಂದಿಗೆ ಬ್ರಹ್ಮಸೂತ್ರಗಳ ಅರ್ಥವನ್ನೂ ಉಪನಿಷತ್ತುಗಳ ಅರ್ಥವನ್ನೂ ಚೆನ್ನಾಗಿ ಪರಿಶೀಲಿಸಿ, ಅವುಗಳಿಗೆ ಭಾಷ್ಯವನ್ನು ೧ ಬರೆಯಬೇಕೆಂದು ಬದರೀಯಾತ್ರೆಗೆಹೊರಡಲು ಸಿದ್ಧರಾದರು. ಅದಕ್ಕೋಸ್ಕರ ಶ್ರೀಮದಾಚಾರ್ಯರು ಭಗವದ್ಗೀತೆಗೆ ಭಾಷ್ಯವನ್ನು ಬರೆದು, ಅದನ್ನು ಅಚ್ಯುತಪ್ರೇಕ್ಷಾಚಾರ್ಯರ ಸನ್ನಿಧಿಯಲ್ಲಿ ಸಮರ್ಪಿಸಿ, ಆ ಗುರುಗಳ ಮನಸ್ಸನ್ನು ಸಂತೋಷಪಡಿಸಿ, ಬದರಿಕಾಶ್ರಮಕ್ಕೆ ಪ್ರಯಾಣ ಮಾಡಲು ಅಪ್ಪಣೆಯನ್ನು ಕೇಳಿಕೊಂಡರು. ಆಗ ಅಚ್ಯುತಪ್ರೇಕ್ಷಾಚಾರ್ಯರು "ಶ್ರೀಮನ್ನಾರಾಯಣನು ಈ ಶಿಷ್ಯನನ್ನು ರಕ್ಷಿಸಲಿ." ಎಂದು ದೇವರನ್ನು ಧ್ಯಾನ ಮಾಡುತ್ತ ಬದರೀ ಯಾತ್ರೆಗೆ ಅಪ್ಪಣೆಯನ್ನು ಕೊಟ್ಟರು. ಈ ಪ್ರಕಾರ ಆಜ್ಞೆಯನ್ನು ತೆಗೆದುಕೊಂಡು, ಶ್ರೀಮದಾನಂದತೀರ್ಥರು ತಮ್ಮ ಶಿಷ್ಯರೊಡನೆ ಉತ್ತರ ದಿಕ್ಕಿಗೆ ಹೊರಟು, ಮಾರ್ಗದಲ್ಲಿ ಅನೇಕ ತೀರ್ಥಯಾತ್ರೆಗಳನ್ನು ಮಾಡುತ್ತ ಮಾಡುತ್ತ ಗಂಗಾ ನದಿಗೆ ಬಂದು, ತಲಪಿದರು. ಆ ಬಳಿಕ ಗಂಗಾ ನದಿಯಲ್ಲಿ ಸ್ನಾನಮಾಡಿ, ಆಹ್ನಿಕವನ್ನು ತೀರಿಸಿಕೊಂಡು, ಬದರಿಕಾಶ್ರಮಕ್ಕೆ ತೆರಳಿದರು. ಆ ಬದರೀ ಕ್ಷೇತ್ರದಲ್ಲಿ ಶ್ರೀಮನ್ನಾರಾಯಣದೇವರನ್ನು ಭಜಿಸುತ್ತ ಕೆಲವು ದಿವಸಗಳ ವರೆಗೆ ಅಲ್ಲಿಯೇ ಅನಂತಮಠದಲ್ಲಿ ವಾಸಮಾಡಿದರು.

ಒಂದು ದಿವಸ ಶ್ರೀಮದಾನಂದತೀರ್ಥರು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು, ಆ ಶ್ರೀಮನ್ನಾರಾಯಣದೇವರ ಸನ್ನಿಧಿಯಲ್ಲಿ ತಾವು

---

೧ ಇದೇ ಮೇರೆಗೆ ಶ್ರೀ ಶಂಕರಾಚಾರ್ಯರೂ ಇದೇ ಬದರಿಕಾಶ್ರಮದಲ್ಲಿ ತಮ್ಮ ಕಾಲದಲ್ಲಿದ್ದ ಬ್ರಹ್ಮರ್ಷಿಗಳೊಂದಿಗೆ ಭಗವದ್ಗೀತಾ, ಬ್ರಹ್ಮಸೂತ್ರ, ದಶೋಪನಿಷತ್ತುಗಳ ಅರ್ಥವನ್ನು ಚೆನ್ನಾಗಿ ವಿಚಾರ ಮಾಡಿ, ಅವುಗಳಿಗೆ ಭಾಷ್ಯವನ್ನು ಬರೆದರೆಂದು ಶಂಕರವಿಜಯದಲ್ಲಿ ಹೇಳಿದೆ.

ರಚಿಸಿದ ಗೀತಾಭಾಷ್ಯವನ್ನು ಪಠನಮಾಡಿದರು. ಆ ಕಾಲಕ್ಕೆ ಶ್ರೀಮದಾಚಾರ್ಯರ ಹೃದಯದಲ್ಲಿರುವ ಶ್ರೀಹರಿಯು– "ಈ ಗೀತಾಭಾಷ್ಯದ ಮಂಗಳಾಚರಣ೧ ಶ್ಲೋಕದಲ್ಲಿಯ 'ಶಕ್ತಿತಃ' ಎಂಬ ಪದವನ್ನು ತೆಗೆದು, ಆ ಸ್ಥಳದಲ್ಲಿ 'ಲೇಶತಃ' ಎಂಬ ಶಬ್ದವನ್ನು ಇಡು." ಎಂದು ಸೂಚಿಸಿದನು. ಕೂಡಲೆ ಆಚಾರ್ಯರು ತಮ್ಮ ಹೃದಯಸ್ಥ ಪರಮಾತ್ಮನ ಸಂದೇಶದ ಪ್ರಕಾರ ಆ ಶ್ಲೋಕದ ಕೊನೆಯ ಪಾದದಲ್ಲಿದ್ದ "ಗೀತಾರ್ಥಂ ವಕ್ಷ್ಯಾಮಿ **ಶಕ್ತಿತಃ**" (ಎಂದರೆ ಭಗವದ್ಗೀತೆಯ ಅರ್ಥವನ್ನು ಶಕ್ತ್ಯನುಸಾರವಾಗಿ ಹೇಳುವೆನು.) ಎಂಬ ವಾಕ್ಯದಲ್ಲಿದ್ದ "ಶಕ್ತಿತಃ" ಎಂಬ ಪದವನ್ನು ತೆಗೆದು ಹಾಕಿ, ಆ ಸ್ಥಳದಲ್ಲಿ "ಲೇಶತಃ" ಎಂಬ ಶಬ್ದವನ್ನು ಇಟ್ಟರು; ಎಂದರೆ "ಗೀತಾರ್ಥಂ ವಕ್ಷ್ಯಾಮಿ **ಲೇಶತಃ**" (ಎಂದರೆ ಭಗವದ್ಗೀತೆಯ ಅರ್ಥವನ್ನು ತುಸು ಮಟ್ಟಿಗೆ ಹೇಳುವೆನು.) ಎಂದು ಬರೆದರು. ತದನಂತರ ತಮ್ಮ ಶಿಷ್ಯರಿಗೆ ಗೀತಾಭಾಷ್ಯವನ್ನು ಪಾಠ ಹೇಳಲುಪಕ್ರಮಿಸಿದರು.

ಆ ಬದರಿಕಾಶ್ರಮದಲ್ಲಿದ್ದ ಜನರು ಚಳಿಯ ಹೆದರಿಕೆಯಿಂದ ಅತಿ ಶೀತಲವಾದ ಶೀತಲ ಗಂಗೆಯ ನೀರಿನಲ್ಲಿ ಸ್ನಾನ ಮಾಡುವುದಕ್ಕೆ ಅಂಜುತ್ತಿದ್ದರು. ಅಂತಹ ಶೀತಲ ಗಂಗೆಯ ಉದಕದಲ್ಲಿ ಶ್ರೀ ಮಧ್ವಾಚಾರ್ಯರು ನಿತ್ಯದಲ್ಲೂ ಅರುಣೋದಯ ಕಾಲದಲ್ಲಿಯೇ ಅವಗಾಹನ ಸ್ನಾನವನ್ನು ಮಾಡುತ್ತಿದ್ದರು. ಸೂರ್ಯೋದಯದ ಮೊದಲು ನಾಲ್ಕು ಘಳಿಗೆ ಅರುಣೋದಯವೆನಿಸುವುದೆಂದು ಶ್ರೀಮದಾಚಾರ್ಯರೇ ಕೃಷ್ಣಾಮೃತಮಹಾರ್ಣವವೆಂಬ ಗ್ರಂಥದಲ್ಲಿ ಹೇಳಿದ್ದರಿಂದ ಆ ಉಷಃಕಾಲದಲ್ಲಿಯೇ ಅಂತಹ ಶೀತಲ ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದರು! ಇದೂ ಅಲ್ಲದೆ ಆ ಬದರೀ ಕ್ಷೇತ್ರದಲ್ಲಿರುವ ಅನಂತಮಠದಲ್ಲಿ ದಿನಾಲೂ ಶ್ರೀ ನಾರಾಯಣನನ್ನು ಧ್ಯಾನ ಮಾಡುತ್ತ

---

೧ ದೇವಂ ನಾರಾಯಣಂ ನತ್ವಾ ಸರ್ವದೋಷ ವಿವರ್ಜಿತಮ್ ।
ಪರಿಪೂರ್ಣಂ ಗುರುಂ ಪಶ್ಚಾದ್ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ ॥

ಅರ್ಥ:– ಸರ್ವ ದೋಷಗಳಿಂದ ರಹಿತನಾದಂಥ ಕಲ್ಯಾಣಗುಣಪೂರ್ಣನಾದಂಥ ಶ್ರೀ ನಾರಾಯಣನಿಗೂ ಗುರುಗಳಿಗೂ ನಮಸ್ಕರಿಸಿ, ಆ ಬಳಿಕ ಶಕ್ತ್ಯನುಸಾರವಾಗಿ ಭಗವದ್ಗೀತಾರ್ಥವನ್ನು ಹೇಳುವೆನು.

ಕಾಷ್ಠಮೌನ ವ್ರತವನ್ನೂ ಉಪವಾಸ ವ್ರತವನ್ನೂ ಆಚರಿಸಿದರು. ಕಾಷ್ಠ ಮೌನವೆಂದರೆ, ಯಾವ ತರಹದಿಂದಲೂ ಜನರೊಡನೆ ಮಾತನಾಡದಿರುವುದು.

ಈ ಪ್ರಕಾರ ಆಚಾರ್ಯರು ಕಾಷ್ಠಮೌನ ವ್ರತದಿಂದಲೂ ಉಪವಾಸ ವ್ರತದಿಂದಲೂ ಈ ಅನಂತಮಠದಲ್ಲಿ ಕಾಲಕ್ರಮಣ ಮಾಡುತ್ತಿರಲು, ಒಂದು ದಿವಸ ಶ್ರೀಮದಾಚಾರ್ಯರ ಹೃದಯಸ್ಥ ಪರಮಾತ್ಮನು–"ನೀನು ಇಲ್ಲಿಂದ ವ್ಯಾಸಾಶ್ರಮಕ್ಕೆ ಹೋಗಿ,ಅಲ್ಲಿರುವ ಬ್ರಹ್ಮರ್ಷಿಗಳೊಂದಿಗೆ ಬ್ರಹ್ಮಸೂತ್ರಗಳ ಹಾಗೂ ಉಪನಿಷತ್ತುಗಳ ಅರ್ಥವನ್ನು ಸಮಾಲೋಚಿಸಿ ಚೆನ್ನಾಗಿ ತಿಳಿದು ಕೊಂಡು,ಅವುಗಳಿಗೆ ಭಾಷ್ಯವನ್ನುರಚಿಸು." ಎಂದು ಇವರಿಗೆ ಪ್ರೇರಣೆಯನ್ನು ಮಾಡಿದನು. ಕೂಡಲೇ ಆಚಾರ್ಯರು ಆ ವ್ಯಾಸಾಶ್ರಮಕ್ಕೆ ಹೊರಡಲು ಸಿದ್ಧತೆಯನ್ನು ಮಾಡಿದರು. ಆಗ ತಾವು ಮೌನ ವ್ರತದಿಂದ ಇದ್ದ ಮೂಲಕ ಶಿಷ್ಯರಿಗೆ ಮುಖದಿಂದ ಉಪದೇಶ ಮಾಡುವುದಕ್ಕೆ ಶಕ್ಯವಿಲ್ಲದ್ದರಿಂದ ತಾವು ವ್ಯಾಸಾಶ್ರಮಕ್ಕೆ ಹೊರಡುವ ಕಾಲಕ್ಕೆ ತಮ್ಮ ಶಿಷ್ಯರಿಗೆ ಮಾಡತಕ್ಕ ಉಪ ದೇಶವನ್ನು ಹೀಗೆ ಬರೆದಿಟ್ಟರು·— "ಪಾಪವನ್ನು ಪರಿಹಾರ ಮಾಡುವು ದರಲ್ಲಿ ಈ ಬದರೀಕ್ಷೇತ್ರಕ್ಕೆ ಸಮಾನವಾದ ಇನ್ನೊಂದು ಕ್ಷೇತ್ರವಿಲ್ಲ; ಇಲ್ಲಿರುವ ಗಂಗಾ ತೀರ್ಥಕ್ಕೆ ಸಮಾನವಾದಂಥ ಪಾಪನಾಶಕರವಾದ ತೀರ್ಥವು ಮತ್ತೊಂದು ಬೇರೆಯಿಲ್ಲ. ಶ್ರೀನಾರಾಯಣ ಪರಮಾತ್ಮನಂತೂ ಅದ್ವಿತೀಯನಾಗಿದ್ದಾನೆ. ಆದುದರಿಂದ ಈ ಬದರೀ ಕ್ಷೇತ್ರದಲ್ಲಿ ಗಂಗಾ ಸ್ನಾನವನ್ನು ಮಾಡುತ್ತ ಶ್ರೀ**ನಾರಾಯಣ**ದೇವರನ್ನು ಸೇವಿಸುತ್ತ ಪರಿ ಶುದ್ಧಾತ್ಮರಾಗಿ, ನಾನು ವ್ಯಾಸಾಶ್ರಮದಿಂದ ತಿರುಗಿ ಬರುವ ವರೆಗೂ ನೀವೆಲ್ಲ ಶಿಷ್ಯರೂ ಇಲ್ಲಿಯೇ ವಾಸಮಾಡಿಕೊಂಡಿರಬೇಕು."

ಐತರೇಯೋಪನಿಷತ್ತಿನಲ್ಲಿ ವಿಷ್ಣುಮಾಹಾತ್ಮ್ಯವು ವಿಶೇಷವಾಗಿ ಕಿಂಬಹುನಾ ಪರಿಪೂರ್ಣವಾಗಿ ನಿರೂಪಿಸಲ್ಪಟ್ಟಿರುತ್ತದೆಂಬುದನ್ನು ಸ್ವತಃ ಶ್ರೀಮದಾಚಾರ್ಯರೇ ಈ ಐತರೇಯೋಪನಿಷದ್ಭಾಷ್ಯದ ಆರಂಭದಲ್ಲಿ ಸಪ್ರ ಮಾಣವಾಗಿ ಹೇಳಿದ್ದಾರೆಂಬುದನ್ನೂ, ಈ ಉಪನಿಷತ್ತಿನ ಅರ್ಥವನ್ನು ಒಂದೇ ಸಾರೆ ವಿಶದಮಾಡಿ ಹೇಳಿ, ಶಿವಭಕ್ತರಾದ ತಮ್ಮ ಅಧ್ಯಾಪಕರನ್ನು (ಎಂದರೆ ಪೂಗವನ ಶಾಸ್ತ್ರಿಗಳನ್ನು) ಹೇಗೆ ವಿಷ್ಣುಭಕ್ತರನ್ನಾಗಿ ಮಾಡಿದ

ರೆಂಬುದನ್ನೂ ಈ ಮೊದಲೇ ೨೪ನೆಯ ಪುಟದಲ್ಲಿ ನಮ್ಮ ವಾಚಕರಿಗೆ ತಿಳಿಸಿದ್ದೇವೆ. ಆತಏವ ವಿಷ್ಣುಮಾಹಾತ್ಮ್ಯದಿಂದ ತುಂಬಿ ತುಳುಕುತ್ತಿರುವಂಥ ಈ ಐತರೇಯೋಪನಿಷತ್ತಿನ ಅರ್ಥವನ್ನು ಒಂದು ಸಾರೆ ಅಲ್ಲ, ಎರಡು ಸಾರೆ ಅಲ್ಲ, ಮೂರು ಸಾರೆ ಶ್ರೀ ಮಧ್ವಾಚಾರ್ಯರಿಂದ ಶ್ರವಣ ಮಾಡಿದಂಥ ಸತ್ಯತೀರ್ಥಯತಿಯು ಪರಮ ವಿಷ್ಣುಭಕ್ತನಾಗಿದ್ದನೆಂಬುದನ್ನು ಹೊಸದಾಗಿ ಬೇರೆ ಹೇಳಬೇಕಾದುದಿಲ್ಲ. ಈ ಪ್ರಕಾರ ಸತ್ಯತೀರ್ಥಯತಿಯು ಶ್ರೀಹರಿಯಲ್ಲಿ ಅತ್ಯಂತ ಉತ್ಕಟವಾದ ಭಕ್ತಿಯುಳ್ಳವನಾದುದರಿಂದಲೇ ಪರಮ ಶ್ರೇಷ್ಠ ವಿಷ್ಣುಭಕ್ತರಾದ ಶ್ರೀ ಮಧ್ವಾಚಾರ್ಯರ ವಿಯೋಗವನ್ನು ಸಹಿಸಲಾರದೆ ಈ ಆಚಾರ್ಯರನ್ನು ಹಿಂಬಾಲಿಸಿ ತಾನೂ ವ್ಯಾಸಾಶ್ರಮಕ್ಕೆ ನಡೆದನು.

ಶ್ರೀಮದಾಚಾರ್ಯರು, ಈ ಹಿಮಾಲಯ ಪರ್ವತದ ಬಹು ಕಷ್ಟಕರವಾದ ಮಾರ್ಗದಲ್ಲಿಯೂ ಕೂಡ ಕಲ್ಲಿನಿಂದ ಕಲ್ಲಿಗೆ ಅನಾಯಾಸವಾಗಿ ಹಾರುತ್ತ ಹಾರುತ್ತ ಮುಂದೆ ಮುಂದೆ ಶೀಘ್ರವಾಗಿ ನಡೆದು ಹೋದರು. ಆದರೆ ಸತ್ಯತೀರ್ಥಯತಿಗಳಿಗೆ ಆಚಾರ್ಯರ ಹಾಗೆ ಶೀಘ್ರವಾಗಿ ನಡೆಯಲು ಸಾಧ್ಯವಾಗಲಿಲ್ಲ. ಆದುದರಿಂದ ಈ ಸತ್ಯತೀರ್ಥರು ಬಹಳೇ ಹಿಂದುಳಿದರು. ಅಷ್ಟರಲ್ಲಿ ಸೂರ್ಯನು ಮುಳುಗುವ ಹೊತ್ತಾಯಿತು. ಆಗ ಆಚಾರ್ಯರು ಹಿಂತಿರುಗಿ ನೋಡಿದರು; ಶಿಷ್ಯನಾದ ಸತ್ಯತೀರ್ಥಯತಿಯು ದೂರದಲ್ಲಿರುವುದನ್ನು ಕಂಡು, ಆತನನ್ನು ಕುರಿತು— 'ಹಿಂತಿರುಗು' ಎಂದು ಕರಸಂಜ್ಞೆಯನ್ನು ಮಾಡಲು, ಆ ಸತ್ಯತೀರ್ಥ ಯತಿಯು ಸ್ವಲ್ಪ ಹೊತ್ತಿನಲ್ಲಿಯೇ ಅನಂತ ಮಠಕ್ಕೆ ತಿರುಗಿ ಬಂದನು. ಮತ್ತು ತನ್ನ ಮಿತ್ರರಿಗೆ ಗುರುಗಳು ನಡೆದು ಹೋದ ಅದ್ಭುತ ಲೀಲೆಯನ್ನು ವರ್ಣಿಸಿ ಹೇಳಿದನು.

ಇತ್ತ ಶ್ರೀಮದಾನಂದತೀರ್ಥರು ಗಗನಚುಂಬಿತ ವೃಕ್ಷಗಳನ್ನೂ ಶಿಖರಗಳನ್ನೂ ನೋಡುತ್ತ, ಅತಿ ತ್ವರೆಯಿಂದ ನಡೆಯುತ್ತ ಮುಂದಕ್ಕೆ ಸಾಗಿರಲು, ಆ ವ್ಯಾಸಾಶ್ರಮದ ಮುನಿಗಳು ದೂರಿನಿಂದಲೇ ಇವರನ್ನು ನೋಡಿ, ಆಶ್ಚರ್ಯಚಕಿತರಾಗಿ, ಯತಿಯ ರೂಪವನ್ನು ಧರಿಸಿದಂಥ ಈ ಮಹನೀಯರು ಚತುರ್ಮುಖ ಬ್ರಹ್ಮದೇವರಾಗಲಿ ವಾಯುದೇವರಾಗಲಿ ಆಗಿರಬೇಕೆಂದು ಊಹಿಸಿದರು. ಶ್ರೀಮದಾನಂದತೀರ್ಥರು ಬೇಗ ಬೇಗನೆ

ಮುಂದಕ್ಕೆ ನಡೆದು ಆ ಆಶ್ರಮದಲ್ಲಿಯ ಬದರೀ ವೃಕ್ಷವನ್ನು (ಎಂದರೆ ಬೋರೆ ಹಣ್ಣಿನ ಗಿಡವನ್ನು ) ಕಂಡು, ಆ ವೃಕ್ಷದ ಕೆಳಗೆ ಅತಿ ವಿಶಾಲವೂ ನಿರ್ಮಲವೂ ಮನೋಹರವೂ ಆದ ಕಟ್ಟೆಯ ಮೇಲೆ ತೇಜಸ್ವಿಗಳಾದ ಮುನಿಶ್ರೇಷ್ಠರನ್ನು ಕಂಡರು. ಶ್ರೀಮದಾಚಾರ್ಯರು ಕೆಲವು ದಿವಸಗಳವರೆಗೆ ಈ ಆಶ್ರಮದಲ್ಲಿಯೇ ಇದ್ದು, ಈ ಬ್ರಹ್ಮರ್ಷಿಗಳ ಮುಖದಿಂದ-ಮಹಾಭಾರತ, ಮೂಲ ರಾಮಾಯಣಗಳೆಂಬ ಇತಿಹಾಸಗಳು, ಸಾತ್ವಿಕ ಪುರಾಣಗಳು, ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ವಿಷ್ಣುಭಕ್ತರಿಗೆ ಅತ್ಯವಶ್ಯವಾದ ಪಂಚರಾತ್ರಾಗಮವು ಮುಂತಾದ ಸಕಲ ವೇದ–ವೇದಾಂಗ–ಉಪಾಂಗಗಳ ಅರ್ಥವನ್ನು ಕೇಳಿ ಚೆನ್ನಾಗಿ ತಿಳಿದುಕೊಂಡರು. ತದನಂತರ ಈ ಮಹರ್ಷಿಗಳ ಅಪ್ಪಣೆಯನ್ನು ಪಡೆದುಕೊಂಡು, ಶ್ರೀಮದಾಚಾರ್ಯರು ಅಲ್ಲಿಂದ ಹೊರಟು, ಶ್ರೀ ಬದರೀ ನಾರಾಯಣ ದೇವರ ಸನ್ನಿಧಿಯಲ್ಲಿರುವ ಅನಂತಮಠಕ್ಕೆ ಬಂದು, ತಮ್ಮ ಶಿಷ್ಯರಿಗೆ ಆಶೀರ್ವಾದ ಮಾಡಿದರು. ಗುರುಗಳು ಬಂದುದರಿಂದ ಶಿಷ್ಯರೆಲ್ಲರಿಗೂ ಅತಿಶಯ ಆನಂದವಾಯಿತು.

ಈ ಪ್ರಕಾರ ಆಚಾರ್ಯರು ಅನಂತಮಠಕ್ಕೆ ಬರಲು, ಅಗ್ನಿಶರ್ಮ ಮೊದಲಾದ ಐದಾರು ಜನ ಬ್ರಾಹ್ಮಣರು ಪ್ರತ್ಯೇಕ ಪ್ರತ್ಯೇಕವಾಗಿ ಆಚಾರ್ಯರ ಪರಿವಾರಕ್ಕೂ ಸಹ ಸಾಲುವಷ್ಟು ಅನ್ನವನ್ನು ಏಕಕಾಲಕ್ಕೆ ತಂದು, ಭಿಕ್ಷೆಯನ್ನು ಸ್ವೀಕರಿಸಬೇಕೆಂದು ಶ್ರೀ ಮಧ್ವಾಚಾರ್ಯರಿಗೆ ಅವರೆಲ್ಲರೂ ಪ್ರಾರ್ಥಿಸಲು, ಆ ಭಕ್ತರ ಕೋರಿಕೆಯನ್ನು ಈಡೇರಿಸಬೇಕೆಂದು ಆ ಎಲ್ಲ ಅನ್ನವನ್ನು ಆಚಾರ್ಯರು ಒಬ್ಬರೇ ಭೋಜನ ಮಾಡಿದರು! ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯವೆನಿಸಿತು. ಇರಲಿ.

ಶ್ರೀಮದಾಚಾರ್ಯರು ಈ ಅನಂತಮಠದಲ್ಲಿಯೇ ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿದರು. ಹೇಗೆಂದರೆ, ಈ ಆಚಾರ್ಯರು ಈ ಭಾಷ್ಯವನ್ನು ದಿನಾಲು ಕ್ರಮಶಃ ರಚಿಸಿ ಹೇಳುತ್ತಿದ್ದರು; ಆ ಪ್ರಕಾರ ಅದನ್ನು ಇವರ ಶಿಷ್ಯರಾದ ಸತ್ಯತೀರ್ಥಯತಿಗಳು ಬರೆಯುತ್ತಿದ್ದರು. ಈ ರೀತಿಯಿಂದ ಶ್ರೀ ಮಧ್ವಾಚಾರ್ಯರು ಕೆಲವು ದಿವಸಗಳಲ್ಲಿ ಬ್ರಹ್ಮಸೂತ್ರಗಳ ಭಾಷ್ಯವನ್ನು ಸಂಪೂರ್ಣವಾಗಿ ರಚಿಸಿದರು. ಈ ಭಾಷ್ಯದಿಂದ, ಪೂರ್ವ ಕಾಲೀನ ೨೧ ಭಾಷ್ಯಗಳು[೧] ನಿರಾಕರಿಸಲ್ಪಟ್ಟವು.

---

೧ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದವರು:— (೧) ಭಾರತೀ ವಿಜಯ (೨) ಸಚ್ಚಿದಾನಂದ (೩) ಬ್ರಹ್ಮಘೋಷ (೪) ಶತಾನಂದ (೫) ಉದ್ವರ್ತ (೬) ವಿಜಯ (೭) ರುದ್ರಭಟ್ಟ

ಈ ಪ್ರಕಾರ ಶ್ರೀ ಮಧ್ವಾಚಾರ್ಯರು ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಿದ ಬಳಿಕ ಆ ಬದರಿಕಾಶ್ರಮದಲ್ಲಿಯ ಶ್ರೀನಾರಾಯಣದೇವರಿಗೆ ನಮಸ್ಕರಿಸಿ, ಶಿಷ್ಯರೊಡನೆ ಅಲ್ಲಿಂದ ಹೊರಟು ಉತ್ತರ ಹಿಂದುಸ್ಥಾನದಲ್ಲಿ ಸಂಚಾರ ಮಾಡಿದರು. ಆ ಕಾಲಕ್ಕೆ ಬಂಗಾಲ ಮುಂತಾದ ಉತ್ತರ ಹಿಂದುಸ್ಥಾನದ ಪ್ರಾಂತಗಳಲ್ಲಿ ಶ್ರೀಮದಾಚಾರ್ಯರು ಉಪದೇಶ ಮಾಡಿದ ಸದ್ವೈಷ್ಣವ-ಮತವು ಅತ್ಯಂತ ಲೋಕಪ್ರಿಯವಾಯಿತು. ಶ್ರೀಮದಾಚಾರ್ಯರು ಬಂಗಾಲ ದೇಶದಿಂದ ಗುಜರಾಥ ದೇಶಕ್ಕೆ ತೆರಳಿ, ದ್ವಾರಕಾ ಪಟ್ಟಣಕ್ಕೆ ಹೋಗಿ, ಅಲ್ಲಿ ಸಾಲಿಗ್ರಾಮಶಿಲೆಯಿಂದ ನಿರ್ಮಿಸಲ್ಪಟ್ಟ ಶ್ರೀಕೃಷ್ಣನ ಪ್ರತೀಕವನ್ನು ತೆಗೆದುಕೊಂಡು, ದಕ್ಷಿಣ ಹಿಂದುಸ್ಥಾನದ ಕಡೆಗೆ ತಿರುಗಿದರು. ಪ್ರಯಾಣ ಮಾಡುತ್ತ ಮಾಡುತ್ತ ಗೋದಾವರೀನದಿಯ ತೀರಕ್ಕೆ ಬಂದರು. ಶ್ರೀ ಮಧ್ವಾಚಾರ್ಯರು ಬಂದಿದ್ದಾರೆಂಬ ವಾರ್ತೆಯನ್ನು ಕೇಳಿದ ಕೂಡಲೇ ಈ ದೇಶದ ಎಲ್ಲ ಪಂಡಿತರೂ ಇವರ ಬಳಿಗೆ ಬಂದರು. ಈ ಪಂಡಿತರು ಶ್ರೀಮದಾ

---

(೮) ವಾಮನ (೯) ಯಾದವ ಪ್ರಕಾಶ (೧೦) ಶಂಕರ (೧೧) ಭರ್ತೃಪ್ರಪಂಚ (೧೨) ದ್ರವಿಡ (೧೩) ಬ್ರಹ್ಮದತ್ತ (೧೪) ಭಾಸ್ಕರ (೧೫) ಪಿಶಾಚ (೧೬) ವೃತ್ತಿಕಾರ (೧೭) ವಿಜಯಭಟ್ಟ (೧೮) ವಿಷ್ಣುಕ್ರಾಂತ (೧೯) ವಾದೀಂದ್ರ (೨೦) ಮಾಧವದಾಸ (೨೧) ರಾಮಾನುಜ (೨೨) ಮಧ್ವ ಈ ಪ್ರಕಾರ ಶ್ರೀಮನ್ಮಧ್ವಾಚಾರ್ಯರ ಕಾಲಕ್ಕೆ ಮುಂಚೆ ೨೧ ಜನ ಬ್ರಹ್ಮಸೂತ್ರಭಾಷ್ಯಕಾರರು ಆಗಿಹೋದರೆಂದು ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಹೇಳಿದ್ದಾರೆ. ಆದರೆ, ಶ್ರೀಮಾನ್ ವಿದ್ವಾನ್ ಎಚ್. ಎನ್. ರಾಘವೇಂದ್ರಾಚಾರ್ಯ ಎಂ. ಎ., ಭಾರತೀಯ ತತ್ತ್ವಶಾಸ್ತ್ರೋಪಾಧ್ಯಾಯ, ಮಹಾರಾಜರವರ ಕಾಲೇಜ, ಮೈಸೂರು ಇವರು, ತಾವು ಬರೆದ "ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ" ಎಂಬ ಗ್ರಂಥದಲ್ಲಿ (ಪುಟ ೪೩೪) ಬ್ರಹ್ಮಸೂತ್ರ ಭಾಷ್ಯಕಾರರ ವಿಷಯವಾಗಿ ಹೀಗೆ ಹೇಳಿದ್ದಾರೆ:— "ಶುಕನೇ ಪ್ರಾಚೀನ ಭಾಷ್ಯಕಾರನೆಂದು ಭಾರತೀಯರಲ್ಲಿ ಪ್ರಸಿದ್ಧಿ. ಶಬರ ಮತ್ತು ಶಂಕರಾಚಾರ್ಯರು ಮೊದಲನೆಯ ಭಾಷ್ಯಕಾರನನ್ನು ವೃತ್ತಿಕಾರ ಉಪವರ್ಷನೆಂದು ಕರೆಯುವರು. ರಾಮಾನುಜಾಚಾರ್ಯರು ಆತನನ್ನು ಬೋಧಾಯನನೆಂದು ಕರೆಯುವರು. ವೇದಾಂತ ದೇಶಿಕರು ಬೋಧಾಯನನೇ ವೃತ್ತಿಕಾರ ಉಪವರ್ಷನೆನ್ನುವರು. ದ್ರಾಮಿಡ, ಟಂಕ, ಭರ್ತೃಪ್ರಪಂಚ, ಭಾರುಚಿ, ಕಪರ್ದಿನ್, ಬ್ರಹ್ಮಾನಂದ ಮತ್ತು ಗುಹದೇವ ಇವರೆಲ್ಲರು ಬ್ರಹ್ಮಸೂತ್ರ ಭಾಷ್ಯಕಾರರು. ಆದರೆ ಇವರ ಗ್ರಂಥಗಳು ಪ್ರಸಿದ್ಧಿಯಲ್ಲಿಲ್ಲ. ಶಂಕರ, ಭಾಸ್ಕರ, ಯಾದವಪ್ರಕಾಶ, ರಾಮಾನುಜ, ಕೇಶವ, ನೀಲಕಂಠ, ಬಲದೇವ, ವಲ್ಲಭ, ವಿಜ್ಞಾನಭಿಕ್ಷು, ಮಧ್ವ ಇವರ ಭಾಷ್ಯಗಳು ಪ್ರಸಿದ್ಧಿಯಲ್ಲಿರುವವು." ಇತ್ಯರ್ಥವೇನೆಂದರೆ, ಶ್ರೀಮಾನ್ ಎಚ್. ಎನ್. ರಾಘವೇಂದ್ರಾಚಾರ್ಯರ ಈ ವಿವೇಚನೆಯು ಐತಿಹಾಸಿಕ ಸತ್ಯದಿಂದ ಪರಿಪೂರ್ಣವಾಗಿದೆ.

ಚಾರ್ಯರನ್ನು ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ತಮ್ಮ ಶಾಖೆಯಿಂದಲೂ ಸಿದ್ಧಾಂತಗಳಿಂದಲೂ ಪರೀಕ್ಷಿಸಿ, ತಾವೇ ಸೋತ ಮೇಲೆ "ಶ್ರೀಮದಾಚಾರ್ಯರೇ ! ಮುಖ್ಯವಾಗಿ ನೀವು ಸರ್ವವನ್ನೂ ತಿಳಿದವರಿದ್ದೀರಿ; ಎಂದರೆ ಸರ್ವಜ್ಞರಾಗಿದ್ದೀರಿ ನಿಮಗೆ ಸಮಾನವಾದ ಪಂಡಿತನು ಯಾರೂ ಇಲ್ಲ." ಎಂದು ಹೇಳಿದರು. ಇವರಲ್ಲಿ ಅತ್ಯಂತ ಘನಪಂಡಿತರಾದ ಶೋಭನಭಟ್ಟರಂತೂ ಆಚಾರ್ಯರ ಪಾಂಡಿತ್ಯಕ್ಕೆ ಮೆಚ್ಚಿ, ಸಂತೋಷದಿಂದ ಭಕ್ತಿಪುರಸ್ಸರವಾಗಿ ಶ್ರೀಮಧ್ವಾಚಾರ್ಯರಿಗೆ ನಮಸ್ಕರಿಸಿದರು. ಅರ್ಥಾತ್ ಶೋಭನಭಟ್ಟರು ಶ್ರೀಮದಾಚಾರ್ಯರ ಪಟ್ಟಶಿಷ್ಯರಾದರು. ಆ ಬಳಿಕ ಆಚಾರ್ಯರು ಸ್ವಶಿಷ್ಯರೊಡನೆ ಅಲ್ಲಿಂದ ಹೊರಟು, ಮಾರ್ಗದಲ್ಲಿ ಸಜ್ಜನರಿಗೆ ತತ್ತ್ವಜ್ಞಾನವನ್ನು ಉಪದೇಶ ಮಾಡುತ್ತ ಮಾಡುತ್ತ ಆ ಉತ್ತರಕರ್ನಾಟಕ[೧]ದಲ್ಲಿ ಸಂಚಾರ ಮಾಡುತ್ತಿರಲು, ಶೋಭನಭಟ್ಟರಂತೆಯೇ,

ಗೋವಿಂದ ಶಾಸ್ತ್ರಿಗಳು (ಇವರ ಆಶ್ರಮನಾಮ **ಮಾಧವತೀರ್ಥರು**)
ಗೋವಿಂದ ಶಾಸ್ತ್ರಿಗಳು ( ,, ,, **ಅಕ್ಷೋಭ್ಯತೀರ್ಥರು**)
ಶ್ಯಾಮಶಾಸ್ತ್ರಿಗಳು ( ,, ,, **ನರಹರಿ ತೀರ್ಥರು**)

ಎಂಬ ಮೂರು ಜನ ಪಂಡಿತರು ಶ್ರೀಮದಾಚಾರ್ಯರ ಶಿಷ್ಯರಾದರು. ಶ್ಯಾಮಶಾಸ್ತ್ರಿಗಳು, ಗಜಪತಿ ನಗರದ ಅರಸು ಮನೆತನಕ್ಕೆ ವಂಶಪರಂಪರೆಯಾಗಿ ಅಮಾತ್ಯ ಸ್ಥಾನವನ್ನು ಪಡೆದ (ಎಂದರೆ ಮಂತ್ರಿಗಳಾಗಿದ್ದ) ವಂಶಕ್ಕೆ ಸೇರಿದವರು. ಅರ್ಥಾತ್ ಲೌಕಿಕ ದೃಷ್ಟಿಯಿಂದಲೂ ವೈದಿಕ ದೃಷ್ಟಿಯಿಂದಲೂ ಶ್ರೇಷ್ಠವಾದ ಮನೆತನದಲ್ಲಿ ಹುಟ್ಟಿದವರು. ಈ ಪ್ರಕಾರ ಇವರು ರಾಜವೈಭವದಿಂದ ಯುಕ್ತರಾಗಿದ್ದರೂ ಪರಮ ವಿರಕ್ತರಾಗಿ ಶ್ರೀಮದಾನಂದತೀರ್ಥರ ಶಿಷ್ಯರಾದರು.

---

೧ ಶ್ರೀ ಮಧ್ವಾಚಾರ್ಯರ ಕಾಲಕ್ಕೆ ಕರ್ನಾಟಕದ ಉತ್ತರ ಮೇರೆಯು ಗೋದಾವರೀ ನದಿಯಾಗಿತ್ತು. ಎಂದರೆ ಗೋದಾವರೀ ನದಿಯ ವರೆಗೆ ಕನ್ನಡ ಭಾಷೆಯು ಪ್ರಚಾರದಲ್ಲಿದ್ದಿತು. ಆದುದರಿಂದಲೇ ಶೋಭನಭಟ್ಟ ಪ್ರಭೃತಿ ಈ ನಾಲ್ಕು ಜನ ಶಿಷ್ಯರು ಉತ್ತರ ಕರ್ನಾಟಕದವರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ.

ತದನಂತರ ಶ್ರೀಮದಾಚಾರ್ಯರು ಶಿಷ್ಯರೊಡನೆ ಉತ್ತರ ಕರ್ನಾಟಕದಿಂದ ತೌಳವ ದೇಶಕ್ಕೆ ಪಯಣಗತಿಯಿಂದ ಸಾಗಿ, ಉಡುಪಿ ಪಟ್ಟಣಕ್ಕೆ ಬಂದು, ಶ್ರೀ ಅನಂತೇಶ್ವರ ದೇವರಿಗೆ ಮತ್ತು ಗುರುಗಳಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿದರು.

---

# ೯ನೆಯ ಅಧ್ಯಾಯ



## ಉಡುಪಿಯಲ್ಲಿ ಶ್ರೀಕೃಷ್ಣಪ್ರತಿಷ್ಠೆಯನ್ನು ಮಾಡಿದರು.

ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿರುವ ಬ್ರಹ್ಮರ್ಷಿಗಳೊಂದಿಗೆ ವೇದಾಂತಶಾಸ್ತ್ರದ ವಿಚಾರವಿನಿಮಯವನ್ನು ಮಾಡಿ, ದ್ವೈತ ಸಿದ್ಧಾಂತದಲ್ಲಿ ನಿಷ್ಣಾತರಾಗಿ, ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದು, ತಿರುಗಿ ಬರುವಾಗ ಮಾರ್ಗದಲ್ಲಿ ಭರತಖಂಡದ ಬೇರೆ ಬೇರೆ ಪ್ರಾಂತಗಳಲ್ಲಿ ದ್ವೈತಸಿದ್ಧಾಂತವನ್ನೂ ವಿಷ್ಣುಭಕ್ತಿಯನ್ನೂ ಉಪದೇಶ ಮಾಡುತ್ತ, ಸರ್ವಜ್ಞರೆಂದು ಪ್ರಖ್ಯಾತರಾಗಿ ಬಂದಿರುವ ತೇಜಸ್ವಿಯಾದ ಶ್ರೀ ಮಧ್ವಾಚಾರ್ಯರನ್ನು ನೋಡಿ, ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರು ಅತ್ಯಂತ ಸಂತೋಷ ಭರಿತರಾದರು. ಆದರೆ ಅಚ್ಯುತಪ್ರೇಕ್ಷಾಚಾರ್ಯರು ಮೂಲತಃ ಅದ್ವೈತ ಮತಾನುಯಾಯಿಗಳಾದುದರಿಂದ ಶಿಷ್ಯರಾದ ಶ್ರೀಮಧ್ವಾಚಾರ್ಯರು ದ್ವೈತ ಸಿದ್ಧಾಂತಕ್ಕನುಸರಿಸಿ ರಚಿಸಿದ ಈ ಬ್ರಹ್ಮಸೂತ್ರ ಭಾಷ್ಯವು ಆ ಗುರುಗಳಿಗೆ ರುಚಿಸಲಿಲ್ಲ. ಆಗ ಶ್ರೀಮದಾನಂದತೀರ್ಥರು ಸಪ್ರಮಾಣವಾಗಿಯೂ ಸಯುಕ್ತಿಕವಾಗಿಯೂ ತಮ್ಮ ಭಾಷ್ಯವನ್ನು ವಿವರಿಸಿ ಹೇಳಲು, ಗುರುಗಳಾದ ಅಚ್ಯುತಪ್ರೇಕ್ಷರೂ, ಹಾಗೂ ಜ್ಯೇಷ್ಠಯತಿಗಳೂ ದ್ವೈತಸಿದ್ಧಾಂತವನ್ನು ಒಪ್ಪಿದರು.

ಶ್ರೀಮಧ್ವಾಚಾರ್ಯರ ತಂದೆಯವರಾದ ಮಧ್ಯಗೇಹಭಟ್ಟರು ಅದ್ವೈತ ಮತಾನುಯಾಯಿಗಳು; ಅಧ್ಯಾಪಕರಾದ ಪೂಗವನಶಾಸ್ತ್ರಿಗಳು ಅದ್ವೈತ ಮತಾನುಯಾಯಿಗಳು; ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರು ಅದ್ವೈತಮತಾನುಯಾಯಿಗಳು. ಕಿಂಬಹುನಾ ಎತ್ತ ನೋಡಿದತ್ತ ಅದ್ವೈತ ಮತಾನುಯಾಯಿಗಳೇ ತುಂಬಿ ಹೋಗಿದ್ದರು! ಇವರೆಲ್ಲರ ಹೃದಯದಲ್ಲಿ ವಿಚಾರಕ್ರಾಂತಿಯನ್ನು ಮಾಡಿ, ದ್ವೈತ ಸಿದ್ಧಾಂತವನ್ನೂ ವಿಷ್ಣುಭಕ್ತಿ

ಯನ್ನೂ ನೆಲೆಗೊಳಿಸಿದ ಧರ್ಮವೀರರೆಂದರೆ ಈ ನಮ್ಮ ಶ್ರೀಮದಾನಂದ ತೀರ್ಥರೇ ಸರಿ!

ಶ್ರೀಮದಾಚಾರ್ಯರು ದ್ವೈತಸಿದ್ಧಾಂತವನ್ನು ಪ್ರಚಾರಪಡಿಸು ವುದಕ್ಕೋಸ್ಕರ ಹೇಗೆ ಭಗವದ್ಗೀತೆಗೂ ಬ್ರಹ್ಮಸೂತ್ರಕ್ಕೂ ಭಾಷ್ಯವನ್ನು ರಚಿಸಿದರೋ, ಹಾಗೆಯೇ ವಿಷ್ಣುಭಕ್ತಿಯನ್ನು ಪ್ರಚಾರ ಪಡಿಸುವುದಕ್ಕೋ ಸ್ಕರ ಉಡುಪಿಯಲ್ಲಿ ಶ್ರೀಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠೆಮಾಡಬೇಕೆಂದು ಬದರಿಯಿಂದ ಒರುವಾಗ ದ್ವಾರಕೆಯಿಂದ ತಂದ ಬಾಲಕೃಷ್ಣನ ಪ್ರತಿಮೆ ಯನ್ನು ಶಿವರೂಪ್ಯಕ್ಷೇತ್ರದಲ್ಲಿಯೇ ಎಂದರೆ ಉಡುಪಿಯಲ್ಲಿರುವ ಅನಂತೇ ಶ್ವರ, ಚಂದ್ರಮೌಳೀಶ್ವರ ದೇವಾಲಯಗಳ (ಅರ್ಥಾತ್ ಶಿವಾಲಯಗಳ) ಬಳಿಯಲ್ಲಿಯೇ ವಿಧಿಪೂರ್ವಕವಾಗಿ ಸ್ವಹಸ್ತದಿಂದ ಪ್ರತಿಷ್ಠೆಮಾಡಿದರು. ಈ ವಿಷಯವಾಗಿ ಭಾವಿಕ ಜನರು ಹೇಳುವ ದಂತ ಕಥೆಯೇನೆಂದರೆ, "ಶ್ರೀ ಮಧ್ವಾಚಾರ್ಯರು ಒಂದಾನೊಂದು ದಿವಸ ಸಮುದ್ರತೀರದಲ್ಲಿ ತಪೋ ನಿಷ್ಠರಾಗಿ ಕುಳಿತಿರುವಾಗ ದ್ವಾರಕೆಯಿಂದ ಬರುತ್ತಿದ್ದ ಒಬ್ಬ ವರ್ತಕನ ಹಡಗವು ಉಸುಕಿನಲ್ಲಿ ಸಿಕ್ಕು ಮುಂದಕ್ಕೆ ಹೋಗದೆ ನಿಂತು ಬಿಟ್ಟಿತು. ಆಗ ಆ ಹಡಗದ ವರ್ತಕನು, ತಾನು ಮುಂದೆ ಏನು ಮಾಡಬೇಕೆಂಬುದು ತಿಳಿಯ ದಂತಾಗಿ ದುಃಖ ಮಾಡಲಾರಂಭಿಸಿದನು. ದಯಾಸಾಗರರಾದ ಶ್ರೀಮದಾ ಚಾರ್ಯರು ತಮ್ಮ ಮೈಮೇಲಿನ ಕಾಷಾಯವಸ್ತ್ರದ ತುದಿಯಿಂದ ಗಾಳಿ ಯನ್ನು ಹಾಕಿ, ಆ ಹಡಗವು ದಡವನ್ನು ಸೇರುವಂತೆ ಅನುಗ್ರಹ ಮಾಡಿ ದರು. ಕೂಡಲೇ ಆ ನೌಕಾಧಿಪತಿಯು ಸಂತೋಷದಿಂದ ಶ್ರೀಮದಾಚಾ ರ್ಯರಿಗೆ ಕೃತಜ್ಞತಾಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರ ಮಾಡಿ "ಯಥೇಷ್ಟವಾಗಿ ಧನ-ಕನಕ ವಸ್ತುಗಳನ್ನು ನಾನು ತಮಗೆ ಕೊಡುತ್ತೇನೆ; ತಾವು ಸ್ವೀಕರಿಸಬೇಕೆಂ"ದು ಆಚಾರ್ಯರನ್ನು ಪ್ರಾರ್ಥಿಸಿದನು. ಆಚಾ ರ್ಯರು ಆ ಧನ-ಕನಕ ವಸ್ತುಗಳನ್ನು ತಿರಸ್ಕರಿಸಿ, ಆ ಹಡಗದಲ್ಲಿರುವ ಗೋಪೀಚಂದನದ ಪೆಂಟಿಗಳನ್ನು ಕೊಟ್ಟರೆ ಸಾಕೆಂದು ನುಡಿದರು. ಆಗ ಆ ವರ್ತಕನು ಅವರ ಕೋರಿಕೆಯಂತೆ ಗೋಪೀಚಂದನದ ಎರಡು ಹೆಂಟಿ ಗಳನ್ನು ಕೊಟ್ಟನು. ಒಂದು ಹೆಂಟಿಯಲ್ಲಿದ್ದ ಬಲರಾಮಪ್ರತಿಮೆಯನ್ನು, ಆ ಸಮುದ್ರತೀರದಲ್ಲಿದ್ದ ಒಡಭಾಂಡೇಶ್ವರ ಗ್ರಾಮದ ಜನರ ಪ್ರಾರ್ಥನೆ

ಯಂತೆ ಆ ಊರಲ್ಲಿಯೇ ಪ್ರತಿಷ್ಠೆ ಮಾಡಿ, ಮತ್ತೊಂದು ಹೆಂಟೆಯ ಮಧ್ಯ ದಲ್ಲಿದ್ದ ದಿವ್ಯವಾದ ಶ್ರೀಕೃಷ್ಣಪ್ರತಿಮೆಯನ್ನು ಹಿಡಿದುಕೊಂಡು, ದ್ವಾದಶ ಸ್ತೋತ್ರದಿಂದ ಸ್ತೋತ್ರ ಮಾಡುತ್ತ ಉಡುಪಿಗೆ ಹೊರಟು, ಮಧ್ಯ ಮಾರ್ಗದಲ್ಲಿ ಆ ದಿವ್ಯ ಮೂರ್ತಿಯನ್ನು ಸ್ವಲ್ಪ ಇಟ್ಟದ್ದರಿಂದ ಆ ಸ್ಥಳವು, **"ಕೆರೆಮಠ ಆದಿ ಉಡುಪಿ"** ಎಂದು ಪ್ರಸಿದ್ಧವಾಯಿತು. ಅನಂತರ ಉಡುಪಿಗೆ ತಂದು, ಸರೋವರದಲ್ಲಿ ತೊಳೆದು ಸ್ವಚ್ಛಮಾಡಿ, ಅತಿ ಸುಂದರ ವಾದಂಥ ಕಡಗೋಲು, ಹಗ್ಗಗಳಿಂದ ಸಹಿತವಾದ ಆ ಶ್ರೀಕೃಷ್ಣನ ವಿಗ್ರಹ ವನ್ನು, ಶ್ರೀಮದಾಚಾರ್ಯರು ಸ್ವಹಸ್ತದಿಂದ ಪ್ರತಿಷ್ಠೆಮಾಡಿದರು. ಸಂಸಾರ ಸಮುದ್ರವನ್ನು ದಾಟುವುದಕ್ಕೆ ಉಡುಪದಂತೆ ಎಂದರೆ ದೋಣಿ ಯಂತೆ ಇರುವ ಶ್ರೀಕೃಷ್ಣನು ಇಲ್ಲಿ ಇರುತ್ತಾನಾದ್ದರಿಂದ ಈ ಕ್ಷೇತ್ರವು ಉಡುಪಮಸ್ಯಾಸ್ತೀತಿ" **ಉಡುಪಿ** ಎಂದು ಪ್ರಸಿದ್ಧವಾಯಿತು."

ಇದೇ ಪ್ರಕಾರ ಈ ಶ್ರೀಕೃಷ್ಣನ ಪ್ರತಿಮೆಯ ವಿಷಯವಾಗಿ ಹೇಳುವ ದಂತ ಕಥೆಯೇನೆಂದರೆ:— "ದ್ವಾರಕೆಯಲ್ಲಿ ದೇವಕಿದೇವಿಯು ಶ್ರೀಕೃಷ್ಣ ನನ್ನು ಕುರಿತು—"ನಿನ್ನ ಬಾಲಲೀಲೆಯನ್ನು ಯಶೋದೆಯು ಮಾತ್ರ ನೋಡಿದಳು. ನನಗೆ ಒಂದಾವರ್ತಿಯಾದರೂ ತೋರಿಸು." ಎಂದು ಹೇಳಲು, ಒಂದು ದಿವಸ ಶ್ರೀಕೃಷ್ಣನು ಬಾಲರೂಪವನ್ನು ಧರಿಸಿ, ಆ ದಿವಸ ಪ್ರಾತಃಕಾಲದಲ್ಲಿ ದೇವಕೀದೇವಿಯು ಮೊಸರು ಕಡೆಯುವಾಗ ಆಕೆಯ ಕೈಯಲ್ಲಿದ್ದ ಕಡೆಗೋಲನ್ನು ಕಸಿದುಕೊಂಡು, ಮೊಸರಿನ ಪಾತ್ರೆಯನ್ನು ಒಡೆದು, ಅನೇಕ ಬಾಲ ಕ್ರೀಡೆಗಳನ್ನು ತೋರಿಸಿದನು. ಹೀಗೆ ಕಡೆಗೋಲನ್ನು ಕಸಿದುಕೊಳ್ಳುವಾಗ ಅದರ ಕೆಳಭಾಗವು ದೇವಕಿಯ ಕೈಯಲ್ಲಿಯೇ ಉಳಿದು ಹೋಯಿತು. ಈ ಬಾಲ ಕ್ರೀಡೆಗಳನ್ನು ರುಕ್ಮಿಣಿಯು ನೋಡಿ, ಏಕಾಂತದಲ್ಲಿ ಶ್ರೀಕೃಷ್ಣನನ್ನು ಕುರಿತು—"ದಿವ್ಯವಾದ ತಮ್ಮ ಬಾಲ ಮೂರ್ತಿಯನ್ನು ಮಾಡಿಸಿಕೊಡಬೇಕೆಂದು" ಪ್ರಾರ್ಥಿಸಲು, ಶ್ರೀಕೃಷ್ಣನು ರುಕ್ಮಿಣಿಯ ಕೋರಿಕೆಯಂತೆ ವಿಶ್ವಕರ್ಮನನ್ನು ಕರೆತರಿಸಿ, ಸಾಲಿಗ್ರಾಮ ಶಿಲೆಯಿಂದ ಕಡೆಗೋಲು, ಹಗ್ಗಗಳನ್ನು ಕೈಯಲ್ಲಿ ಹಿಡಿದಿರುವ ಬಾಲಕೃಷ್ಣನ ಪ್ರತಿಮೆಯನ್ನು ಮಾಡಿಸಿ, ರುಕ್ಮಿಣಿಗೆ ಕೊಟ್ಟನು. **ಈ ರುಕ್ಮಿಣೀ ಮೊದ ಲಾದ ಶ್ರೀಕೃಷ್ಣನ ಅಷ್ಟಮಹಿಷಿಯರು ಈ ಮೂರ್ತಿಯನ್ನು**

**ಪೂಜಿಸಿದರು.** ಕೃಷ್ಣಾವತಾರದ ಕೊನೆಯಲ್ಲಿ ಅರ್ಜುನನು ಈ ಶ್ರೀಕೃಷ್ಣನ ಪ್ರತಿಮೆಯನ್ನು ಗೋಪೀಚಂದನದ ಬೆಟ್ಟದಲ್ಲಿ ಮುಚ್ಚಿಟ್ಟನು. ಆದ್ದರಿಂದ ಈ ಪ್ರತಿಮೆಯು ಗೋಪೀಚಂದನದ ಹೆಂಟೆಯ ಹೊಟ್ಟೆಯಲ್ಲಿದ್ದಿತು. ಇದನ್ನು ಗೋಪೀಚಂದನ ಹೆಂಟೆಯೆಂದು ತಿಳಿದು ಈ ವ್ಯಾಪಾರಸ್ಥ ನಾವಿಕನು ಅಲ್ಲಿಂದ ತೆಗೆದುಕೊಂಡು ಬಂದಿದ್ದನು.''

ಇವೆರಡು ದಂತಕಥೆಗಳಲ್ಲಿ, ಪರಮ ವಿಷ್ಣುಭಕ್ತರಾದ ಶ್ರೀಮದಾನಂದತೀರ್ಥರು ಮೊದಲನೆಯ ಸಾರೆ ಬದರಿಕಾಶ್ರಮಕ್ಕೆ ಹೋಗಿ ತಿರುಗಿ ಬರುವಾಗ ಶ್ರೀಕೃಷ್ಣನ ರಾಜಧಾನಿಯಾದ ದ್ವಾರಕೆಗೆ ಹೋಗಿ, ಸಾಲಿಗ್ರಾಮ ಶಿಲೆಯ ಶ್ರೀಕೃಷ್ಣನ ಪ್ರತೀಕವನ್ನು ತೆಗೆದುಕೊಂಡು ಬಂದರೆಂಬ ಐತಿಹಾಸಿಕ ಅಂಶವು ಚೆನ್ನಾಗಿ ಧ್ವನಿತವಾಗಿದೆ. ಇದಲ್ಲದೆ ಕೊನೆಯ ಸಾರೆ ಬದರಿಕಾಶ್ರಮಕ್ಕೆ ಹೋಗುವಾಗ ಈ ಶ್ರೀಕೃಷ್ಣದೇವರ ಪೂಜೆಯನ್ನು ಮಾಡುವುದಕ್ಕೋಸ್ಕರ **ಕಣ್ವತೀರ್ಥ** ಮಹಾ ಕ್ಷೇತ್ರದಲ್ಲಿ ಎಂಟು ಜನ ಬ್ರಹ್ಮಚಾರಿಗಳಿಗೆ ಸನ್ಯಾಸಾಶ್ರಮವನ್ನು ಕೊಟ್ಟು, ಆ ಅಷ್ಟಜನ ಯತಿಗಳನ್ನು ಶ್ರೀಕೃಷ್ಣನ ಅರ್ಚಕರನ್ನಾಗಿ ನೇಮಿಸಿದ್ದರ ಕಾರ್ಯಕಾರಣ ಸಂಗತಿಯನ್ನು ಸರಿಯಾಗಿ ಹೊಂದಿಸುವುದಕ್ಕಾಗಿಯೇ ಮೇಲೆ ಹೇಳಿದ ೨ನೆಯ ದಂತಕಥೆಯು ರಚಿಸಲ್ಪಟ್ಟಿದೆ; ಎಂದರೆ ಈ ಶ್ರೀಕೃಷ್ಣಪ್ರತಿಮೆಯು ಶ್ರೀಕೃಷ್ಣನ ಅಷ್ಟಮಹಿಷಿಯರಿಂದ ಪೂಜಿಸಲ್ಪಟ್ಟಿದ್ದರಿಂದ ಈ ಅಷ್ಟಮಹಿಷಿಯರ ಪ್ರತಿನಿಧಿಗಳೆಂದು ಈ ಅಷ್ಟಜನ ಯತಿಗಳನ್ನು ಶ್ರೀಕೃಷ್ಣನ ಪೂಜೆಗೋಸ್ಕರ ನಿಯಮಿಸಿದರು, ಎಂಬ ಅಂಶವನ್ನು ಈ ಕಥೆಯಿಂದ ವ್ಯಕ್ತಪಡಿಸಿದ್ದಾರೆ. ಆದರೆ ಶ್ರೀಕೃಷ್ಣನ ಪೂಜೆಯನ್ನು ಮಾಡುವುದಕ್ಕೆ ಎಂಟೇ ಜನ ಯತಿಗಳನ್ನು ಯಾಕೆ ನಿಯಮಿಸಿದರು ? ಎಂಬ ಪ್ರಶ್ನೆಗೆ ಸಮಂಜಸವಾದ ಉತ್ತರವನ್ನು ಕೊನೆಯ ಅಧ್ಯಾಯದಲ್ಲಿ ಹೇಳುವವರಿದ್ದೇವೆ. ಇರಲಿ.

ಶ್ರೀಮನ್ಮಧ್ವಾಚಾರ್ಯರು ಈ ಶ್ರೀಕೃಷ್ಣನ ಪ್ರತಿಮೆಯನ್ನು ಸ್ವಹಸ್ತದಿಂದ ಯಥಾವಿಧಿಯಾಗಿ ಪ್ರತಿಷ್ಠೆಮಾಡಿ, ಸ್ವತಃ ಪೂಜಿಸಿದ್ದರಿಂದ "ಪ್ರತಿಮಾಯಾಂ ತು ಸಾನ್ನಿಧ್ಯಂ ಅರ್ಚಕಸ್ಯ ತಪೋಬಲಾತ್" ಎಂಬ ಪ್ರಮಾಣಕ್ಕನುಸರಿಸಿ, ಈ ಪ್ರತಿಮೆಯಲ್ಲಿ ಶ್ರೀಕೃಷ್ಣನ ಸನ್ನಿಧಾನವನ್ನು ನೆಲೆಗೊಳಿಸಿದರು.

ಈ ಕಾಲಕ್ಕೆ ಶ್ರೀ ಮಧ್ವಾಚಾರ್ಯರ ತಮ್ಮಂದಿರು ಪಾಂಡಿತ್ಯವನ್ನು ಸಂಪಾದಿಸಿ ಪ್ರೌಢರಾಗಿ, ಶ್ರೀಮದಾಚಾರ್ಯರಲ್ಲಿ ಪರಮ ಭಕ್ತಿಭಾವವನ್ನು ವ್ಯಕ್ತಪಡಿಸುತ್ತಿದ್ದರು. ಶ್ರೀಮದಾಚಾರ್ಯರಿಗೆ ಪೂರ್ವಾಶ್ರಮದಲ್ಲಿ ಅಧ್ಯಾಪಕರಾಗಿದ್ದ ಪೂಗವನ ಶಾಸ್ತ್ರಿಗಳ ಮಗನಾದ ವಾಸುದೇವನೆಂಬವನು ಯಜ್ಞವನ್ನು ಮಾಡಲುಪಕ್ರಮಿಸಿದನು. ಆ ಕಾಲಕ್ಕೆ ಶ್ರೀಮದಾಚಾರ್ಯರ ತಮ್ಮಂದಿರೇ ಹೋತೃಗಳಾಗಿದ್ದರು. ಎಂದರೆ ಮುಖ್ಯ ಪುರೋಹಿತರಾಗಿದ್ದರು. ಈ ಯಜ್ಞ ಕಾರ್ಯಕ್ಕೆ ಒಬ್ಬನು ಮಾತ್ಸರ್ಯದಿಂದ ವಿರೋಧಿಯಾಗಿದ್ದನು. ಶ್ರೀಮದಾಚಾರ್ಯರು ಈ ವಿರೋಧಿ ಜನರನ್ನೆಲ್ಲ ಬಹಿಷ್ಕರಿಸಿ, ವಾಸುದೇವನಿಂದ ಯಜ್ಞವನ್ನು ಮಾಡಿಸಿದರು.

ಈ ಪ್ರಕಾರ ಶ್ರೀಕೃಷ್ಣಪ್ರತಿಷ್ಠೆಯ ಕಾರ್ಯವೂ, ಈ ಯಜ್ಞಕಾರ್ಯವೂ ಸಂಪೂರ್ಣವಾದ ಬಳಿಕ ಶ್ರೀಮದಾನಂದತೀರ್ಥರು ಉಡುಪಿಯಲ್ಲಿ ಕೆಲವು ದಿವಸ ವಾಸ ಮಾಡಿ, ದಿನಾಲು ಅನಂತೇಶ್ವರ ದೇವಾಲಯದಲ್ಲಿ ಪ್ರವಚನವನ್ನು ಹೇಳಿದರು, ತದನಂತರ ಪುನಃ ಬದರಿಕಾಶ್ರಮಕ್ಕೆ ತೆರಳಿದರು.

---

# ೧೦ನೆಯ ಅಧ್ಯಾಯ

## ಬದರಿಕಾಶ್ರಮಕ್ಕೆ ೨ನೆಯ ಸಾರೆ. ಹೊರಟರು.

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಅನೇಕ ಜನ ಶಿಷ್ಯರೊಡನೆ ಪುನಃ ೨ನೆಯ ಸಾರೆ ಬದರಿಕಾಶ್ರಮಕ್ಕೆ ಹೊರಡಲು, ಮಾರ್ಗದಲ್ಲಿ ಮೊಟ್ಟ ಮೊದಲು ಹೊಯ್ಸಳ ಯಾದವ ರಾಜನಾದ ಸೋಮೇಶ್ವರದೇವನು ( ಕ್ರಿ. ಶ. ೧೨೩೩-೧೨೫೪ ) ಭೆಟ್ಟಿಯಾದನು. ಈ ಅರಸನು ತನ್ನ ದೇಶದಲ್ಲಿ ಒಂದು ಕೆರೆಯನ್ನು ನಿರ್ಮಿಸುವುದಕ್ಕಾಗಿ ದಾರಿಗರಾದ ಜನರನ್ನು 'ಬಿಟ್ಟಿ' ಹಿಡಿದು, ಅವರಿಂದ ಭೂಮಿಯನ್ನು ಅಗೆಸುತ್ತಿದ್ದನು. ಅದೇ ಕಾಲಕ್ಕೆ ಶ್ರೀಮದಾಚಾರ್ಯರು ಈ ದೇಶದಲ್ಲಿ ಹಾಯಿದು ಹೋಗುವಾಗ್ಗೆ, ಈ ಭೂಪನು ಆಚಾರ್ಯರನ್ನು ಕುರಿತು–"ಈ ಸ್ಥಳವನ್ನು ಅಗೆಯಬೇಕೆಂ"ದು ಹೇಳಲು, ಆಗ ಶ್ರೀಮದಾಚಾರ್ಯರು ಆ ರಾಜನನ್ನು ಕುರಿತು— "ಎಲೈ ಅರಸನೇ! ನಾವು ಈ ಕೆಲಸವನ್ನು ತಿಳಿಯದವರಿದ್ದೇವೆ; ನೀನು ಅಗೆದು ತೋರಿಸಿದರೆ, ಅದರಂತೆ ಆ ಮೇಲೆ ನಾವು ಅಗೆಯಬಲ್ಲೆವು." ಎಂದು ಹೇಳಿದರು. ಅದಕ್ಕೆ ಆ ಅರಸನು ಯಾಕಾಗಲೊಲ್ಲದೆಂದು ನುಡಿದು, ಸ್ಥಳವನ್ನು ಅಗೆಯುವ ಕ್ರಮವನ್ನು ತೋರಿಸಲಾರಂಭಿಸಿ, ಆಚಾರ್ಯರ ಪ್ರಭಾವದಿಂದ ಆತನು ಹಾಗೆಯೇ ಅಗೆಯುತ್ತ ನಿಂತುಬಿಟ್ಟನು! ಇತ್ತ ಆಚಾರ್ಯರು ಶಿಷ್ಯರೊಡನೆ ಮುಂದಕ್ಕೆ ಹೊರಟು ಹೋಗಿದ್ದರು.

ತದನಂತರ ಆಚಾರ್ಯರು ಸಂಚಾರ ಮಾಡುತ್ತ ಮಾಡುತ್ತ ಭಾಗೀರಥೀ ನದಿಯ ತೀರಕ್ಕೆ ಬಂದರು. ಆಗ ದೇಶದಲ್ಲಿ ನಾಸಿರುದ್ದೀನ ಮಹಮ್ಮೂದನೆಂಬವನು ( ಕ್ರಿ. ಶ. ೧೨೩೬ರಿಂದ ೧೨೫೬ರ ವರೆಗೆ ) ರಾಜ್ಯವನ್ನಾಳುತ್ತಿದ್ದನು. ಸುಪ್ರಸಿದ್ಧನಾದ ಗಿಯಾಸುದ್ದೀನ ಬಲ್ಬನ್ನನೆಂಬವನು ಇವನ ಮಂತ್ರಿಯಾಗಿದ್ದನು. ಈ ನಾಸಿರುದ್ದೀನ ಮಹಮ್ಮೂದ ಸುಲ್ತಾನನು ದೊಡ್ಡ

ಪಂಡಿತನೂ ಶೂರನೂ ಆಗಿದ್ದನು. ಈ ಸುಲ್ತಾನನು, ಸಿಂಧೂನದಿಯ ಪಶ್ಚಿಮ ಪ್ರಾಂತವನ್ನು ಸ್ವಾಧೀನ ಪಡಿಸಿಕೊಂಡಿದ್ದ ಮೊಗಲರಿಗೆ ಖೋಖಾರ ಪಂಗಡದವರು ಸಾಹಾಯ್ಯವನ್ನು ಮಾಡಿದ್ದರಿಂದ ಅವರನ್ನು ಇವನು ಬಗ್ಗು ಬಡಿದನು. ಇದೇ ಮೇರೆಗೆ ರಜಪೂತರೊಡನೆ ಎರಡು ಸಾರೆ ಯುದ್ಧ ಮಾಡಿ, ಅವರನ್ನೂ ಸೋಲಿಸಿದನು. ಈ ಪ್ರಕಾರ ಇವನು ಯುದ್ಧದ ಗಲಭೆಯುಳ್ಳವ್ಯಾಗ್ಗೆ ಭಾಗೀರಥೀ ನದಿಯ ದಂಡೆಗೆ ಕಾವಲುಗಾರರನ್ನು ಇಟ್ಟಿದ್ದನು. ಮತ್ತು ಶತ್ರುಗಳು ಬಂದಾರೆಂಬ ಹೆದರಿಕೆಯಿಂದ ಈ ಗಂಗಾ ನದಿಯೊಳಗಿನ ದೋಣಿಗಳನ್ನೆಲ್ಲ ತೆಗೆಸಿ ಬಿಟ್ಟಿದ್ದನು. ಇಂಥ ಪರಿಸ್ಥಿತಿಯಲ್ಲಿ ಶ್ರೀ ಮಧ್ವಾಚಾರ್ಯರು ಅನೇಕ ಜನ ಶಿಷ್ಯರೊಡನೆ ಈ ಭಾಗೀರಥೀ (ಎಂದರೆ ಗಂಗಾ) ನದಿಯ ತೀರಕ್ಕೆ ಬಂದರು. ಆ ಕಾಲಕ್ಕೆ ಈ ನದಿಯಲ್ಲಿ ಹರಿಗೋಲುಗಳಾಗಲಿ ದೋಣಿಗಳಾಗಲಿ ಇಲ್ಲದ್ದರಿಂದ ಈ ನದಿಯನ್ನು ದಾಟುವುದು ಕಠಿಣವಾಯಿತು. ಆದರೂ ಧೀರೋದಾತ್ತರಾದ ಶ್ರೀಮದಾಚಾರ್ಯರು ತಾವೇ ಸ್ವತಃ ಮೊದಲು ನದಿಯಲ್ಲಿಳಿದು, ಮೂಲಾಶ್ರಯರಾಗಿ ನಿಂತುಕೊಂಡು, ತಮ್ಮ ಕೈಯನ್ನು ಹಿಡಿಯುವುದಕ್ಕೆ ಒಬ್ಬ ಶಿಷ್ಯನಿಗೆ ಹೇಳಿ, ಆ ಶಿಷ್ಯನ ಕೈಯನ್ನು ಮತ್ತೊಬ್ಬ ಶಿಷ್ಯನು ಈ ಕ್ರಮದಿಂದ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು, ಎಲ್ಲರೂ ಆ ನದಿಯನ್ನು ದಾಟುವಂತೆ ಉಪಾಯ ಮಾಡಿ, ಆ ಶಿಷ್ಯರೊಡನೆ ಆಚಾರ್ಯರು ಆಚೆಯ ದಂಡೆಗೆ ಹೋದರು. ಆ ಕ್ಷಣವೇ ಅಲ್ಲಿ ಕಾವಲು ಮಾಡುತ್ತ ನಿಂತಿದ್ದ ಸುಲ್ತಾನನ ಸೈನಿಕರು "ಇವರು ನಮ್ಮ ಶತ್ರುಪಕ್ಷದವರು ಇವರೆಲ್ಲರನ್ನು ಹೊಡೆಯಿರಿ; ಕೊಲ್ಲಿರಿ !" ಎಂದು ಆಕ್ರೋಶ ಮಾಡುತ್ತ ಇವರ ಮೇಲೆ ಏರಿ ಬಂದರು. ಆಗ ಶ್ರೀಮದಾಚಾರ್ಯರು ಲವಲೇಶವಾದರೂ ಹೆದರದೆ ಮುಸಲ್ಮಾನೀ ಭಾಷೆಯಿಂದಲೇ ಎಂದರೆ ಉರ್ದು ಇಲ್ಲವೆ ಪಾರ್ಸಿ ಭಾಷೆಯಿಂದಲೇ ಯೋಗ್ಯವಾದ ಮಾತುಗಳಿಂದ ಆ ಸೈನಿಕರನ್ನು ಶಾಂತಗೊಳಿಸಿ, ನಾವು ನಿಮ್ಮ ಅರಸನ ಹತ್ತಿರಕ್ಕೇ ಹೋಗುತ್ತೇವೆ; ಅಂಜಬೇಡಿರಿ. ಎಂದು ಹೇಳಿ, ಆಚಾರ್ಯರು ನೆಟ್ಟಗೆ ಸುಲ್ತಾನನ ಬಳಿಗೆ ಬಂದರು. ಆಗ ಆ ವಿದ್ವಾಂಸನಾದ ನಾಸಿರುದ್ದೀನ ಮಹಮ್ಮದ ಸುಲ್ತಾನನು ಶ್ರೀಮದಾಚಾರ್ಯರನ್ನು ನೋಡಿದಾಕ್ಷಣವೇ ಇವರು ಮಹಾ ತಪೋನಿಧಿಗಳಿದ್ದಾರೆಂಬುದನ್ನು ತಿಳಿದು, ವಿನಯಪೂರ್ವಕ

ವಾಗಿ ಹೀಗೆ ಕೇಳಿದನು:— "ಭಾಗೀರಥೀ ನದಿಯ ದಕ್ಷಿಣ ದಂಡೆಯಿಂದ ಬರುವವರನ್ನು ಶತ್ರುಗಳೆಂದೆಣಿಸಿ, ಕೊಲ್ಲಬೇಕೆಂದು ನಾನು ಕಟ್ಟಪ್ಪಣೆಯನ್ನು ಮಾಡಿರಲಾಗಿ, ನೀವು ಆ ಕಾವಲುಗಾರರ ಕೈಯಿಂದ ತಪ್ಪಿಸಿಕೊಂಡು ಹೇಗೆ ಪಾರಾಗಿ ಬಂದಿರಿ? ಹೇಳಿರಿ." ಈ ಪ್ರಶ್ನೆಗೆ ಆಚಾರ್ಯರು ಮುಸಲ್ಮಾನೀ[೧] ಭಾಷೆಯಲ್ಲಿಯೇ ಉತ್ತರ ಕೊಟ್ಟು, ತಮ್ಮ ವೃತ್ತಾಂತವನ್ನೆಲ್ಲ ಹೇಳಿದರು. ಆ ವಿದ್ಯಾವಿನಯಸಂಪನ್ನನಾದ ಸುಲ್ತಾನನು ಈ ಮಧ್ವಾಚಾರ್ಯರ ಗಾಂಭೀರ್ಯ, ಧೈರ್ಯ, ಶ್ರೇಷ್ಠ ಪೌರುಷ, ಸರ್ವ ವಿದ್ಯಾಪಾಂಡಿತ್ಯ, ಹಾಗೂ ಉತ್ತಮ ತೇಜಸ್ಸು, ದೇಶಕಾಲಗಳಿಗೆ ಯೋಗ್ಯವಾದ ಮಾತು ಮುಂತಾದ ಲೋಕೋತ್ತರವಾದ ಸದ್ಗುಣಗಳನ್ನು ಕಂಡು ಆಶ್ಚರ್ಯಪಟ್ಟು, ಆ ಕ್ಷಣದಲ್ಲಿಯೇ ಶ್ರೀಮದಾಚಾರ್ಯರ ಪಾದಾರವಿಂದದಲ್ಲಿ ತನ್ನ ಅರ್ಧರಾಜ್ಯವನ್ನು ಭಕ್ತಿಪುರಸ್ಸರವಾಗಿ ಸಮರ್ಪಿಸಿದನು. ಆದರೆ ಪರಮ ವಿರಕ್ತರಾದ ಶ್ರೀಮದಾಚಾರ್ಯರು "ನಿಸ್ಪೃಹಸ್ಯ ತೃಣಂ ಜಗತ್" ಎಂಬ ನ್ಯಾಯದಂತೆ ಕೊಟ್ಟ ಅರ್ಧ ರಾಜ್ಯವನ್ನು ಆ ಸುಲ್ತಾನನಿಗೆ ಬಿಟ್ಟು ಕೊಟ್ಟು, ಆಶೀರ್ವಾದ ಮಾಡಿದರು. ಆ ಬಾದಶಹನು ಆಚಾರ್ಯರನ್ನು ಬಹುಮಾನಪೂರ್ವಕವಾಗಿ ಮುಂದಕ್ಕೆ ಕಳುಹಿಸಿದನು.

ಶ್ರೀಮದಾನಂದತೀರ್ಥರು ಅಲ್ಲಿಂದ ಬದರಿಕಾಶ್ರಮಕ್ಕೆ ತೆರಳಿದರು. ಮಾರ್ಗದಲ್ಲಿ ಅನೇಕ ಕಳ್ಳರ-ಕಾಕರ ಹಾವಳಿಗಳಿಂದ ಯುಕ್ತಿ ಪ್ರಯುಕ್ತಿಯಿಂದ ಪಾರಾಗಿ, ಚಿಕ್ಕ ಬದರಿಗೆ ಹೋಗಿ, ಅಲ್ಲಿ ಶಿಷ್ಯರನ್ನು ಬಿಟ್ಟು, ತಾವು ದೊಡ್ಡ ಬದರಿಗೆ ಎಂದರೆ ವ್ಯಾಸಾಶ್ರಮಕ್ಕೆ ಹೋಗಿ, ಅಲ್ಲಿರುವ ಬ್ರಹ್ಮರ್ಷಿಗಳಿಂದ ಎಂಟು ವ್ಯಾಸಸಾಲಿಗ್ರಾಮಗಳನ್ನು ಇಸುಕೊಂಡರು. ಮತ್ತು ಆ ಮಹರ್ಷಿಗಳಿಂದ ಮಹಾಭಾರತಕ್ಕೆ ಉತ್ತಮವಾದ ವ್ಯಾಖ್ಯಾನವನ್ನು ಮಾಡುವುದಕ್ಕೆ ಅಪ್ಪಣೆಯನ್ನು ಪಡೆದರು. ಈ ಪ್ರಕಾರ ಶ್ರೀಮದಾಚಾ

೧ ಶ್ರೀ ಮಧ್ವಾಚಾರ್ಯರು ಮೊದಲನೆಯ ಸಾರೆ ಬದರಿಕಾಶ್ರಮಕ್ಕೆ ಹೋಗಿ, ತಿರುಗಿ ಬರುವಾಗ ಬಂಗಾಲ ಮುಂತಾದ ಉತ್ತರಹಿಂದುಸ್ಥಾನದ ಪ್ರಾಂತಗಳಲ್ಲಿ ದ್ವೈತಸಿದ್ಧಾಂತವನ್ನೂ ವಿಷ್ಣುಭಕ್ತಿಯನ್ನೂ ಪ್ರಸಾರ ಮಾಡುವುದಕ್ಕೋಸ್ಕರ ಕೆಲವು ದಿವಸ ವಾಸ ಮಾಡಿದಾಗ್ಗೆ ಆ ಉತ್ತರ ಹಿಂದುಸ್ಥಾನದಲ್ಲಿ ಆಗ ರಾಜಕೀಯ ಭಾಷೆಯಾದ ಮುಸಲ್ಮಾನೀ ಭಾಷೆಯನ್ನು ಈ ಆಚಾರ್ಯರು ಮಾತನಾಡುವುದಕ್ಕೆ ಕಲಿತಿರಲಿಕ್ಕೆ ಸಾಕು.

ರ್ಯರು ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥವನ್ನು ಬರೆಯುವುದಕ್ಕೆ ಬ್ರಹ್ಮರ್ಷಿಗಳಿಂದ ಅನುಜ್ಞೆಯನ್ನು ಪಡೆದು, ಆ ಬದರಿಕಾಶ್ರಮದಿಂದ ಶಿಷ್ಯರೊಡನೆ ಹೊರಟು ಗಂಗಾನದಿಯ ತೀರಕ್ಕೆ ಬಂದರು. ಆದರೆ ಆ ಗಂಗಾನದಿಯನ್ನು ದಾಟುವುದಕ್ಕೆ ದೋಣಿ, ಹರಿಗೋಲು ಮೊದಲಾದ ಯಾವ ಸಾಧನಗಳೂ ಇಲ್ಲದ್ದನ್ನು ಕಂಡು, ಶಿಷ್ಯರು ಆ ಹೊಳೆಯ ದಡದಲ್ಲಿ ಕುಳಿತುಕೊಂಡು ವ್ಯಸನಪಡುತ್ತಿರಲು, ಶ್ರೀಮದಾಚಾರ್ಯರು ತಾವೊಬ್ಬರೇ ಗಂಗಾನದಿಯನ್ನು ದಾಟಿಬಿಟ್ಟರು. ಈ ಪ್ರಕಾರ ದೋಣಿಯಾಗಲಿ ಹರಿಗೋಲಾಗಲಿ ಯಾವ ಸಾಧನವೂ ಇಲ್ಲದೆ ಇಂಥ ದೊಡ್ಡ ನದಿಯನ್ನು ಸುಲಭವಾಗಿ ದಾಟಿ ಬಂದವನ್ನು ನೋಡಿ, ಈಚೆಯ ದಡೆಯ ಮೇಲಿದ್ದ ಬ್ರಾಹ್ಮಣರೂ [1] ಅರಸನೂ ಆಶ್ಚರ್ಯಚಕಿತರಾಗಿ ಶ್ರೀಮದಾಚಾರ್ಯರಿಗೆ ನಮಸ್ಕಾರವನ್ನು ಮಾಡಿದರು. ಇಷ್ಟೇ ಅಲ್ಲ, ಆ ರಾಜನು ಶ್ರೀಮದಾಚಾರ್ಯರ ಶಿಷ್ಯರನ್ನು ಆಚೆಯ ದಡೆಯಿಂದ ದೋಣಿಯಲ್ಲಿ ಕರೆದುಕೊಂಡು ಬರುವುದಕ್ಕೆ ತನ್ನ ಅಂಬಿಗರಿಗೆ ಆಜ್ಞೆಯನ್ನು ಮಾಡಿದನು. ಆ ರಾಜಾಜ್ಞೆಯಂತೆ ಅವರನ್ನು ಅಂಬಿಗರು ದೋಣಿಗಳಲ್ಲಿ ಕರೆದುಕೊಂಡು ಬಂದರು. ಆಗ ಆ ಮಧ್ವ ಶಿಷ್ಯರು, ದೇವತೆಗಳ ಸಭೆಯಲ್ಲಿ ಕುಳಿತು ಸಾಕ್ಷಾತ್ ಬ್ರಹ್ಮದೇವರು ವೇದಾರ್ಥವನ್ನು ಉಪದೇಶಿಸುವಂತೆ ಶ್ರೀ ಮಧ್ವಾಚಾರ್ಯರು ಪಂಡಿತರ ಸಭೆಯ ಮಧ್ಯದಲ್ಲಿ ಕುಳಿತು ವೇದವನ್ನು ಉಪದೇಶಿಸುತ್ತಿರುವುದನ್ನು ನೋಡಿದರು.

ಚಾತುರ್ಮಾಸ್ಯ ವ್ರತಕ್ಕೋಸ್ಕರ ಶ್ರೀಮದಾಚಾರ್ಯರು ಹಸ್ತಿನಾವತಿಗೆ ಹೋಗಿ, ಗಂಗಾನದಿಗೆ ಸ್ವಲ್ಪ ದೂರದಲ್ಲಿರುವ ಯೋಗ್ಯವಾದ ಒಂದು ಮಠದಲ್ಲಿ ಚಾತುರ್ಮಾಸ್ಯ ನಾಲ್ಕು ತಿಂಗಳಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತ ವಾಸ ಮಾಡಿದರು. ಚಾತುರ್ಮಾಸ್ಯ ವ್ರತವು ಮುಗಿದ ಬಳಿಕ ಶ್ರೀ ಮಧ್ವಾಚಾರ್ಯರು ಕಾಶೀ ಕ್ಷೇತ್ರಕ್ಕೆ ಬಂದರು. ಈ ಕ್ಷೇತ್ರದಲ್ಲಿ **ಇಂದ್ರಪುರಿ**ಯೆಂಬ ಯತಿಯನ್ನು ಶ್ರೀಮದಾಚಾರ್ಯರು ವಾದದಲ್ಲಿ ಜಯಿಸಿ, ತದನಂತರ ಕುರುಕ್ಷೇತ್ರ, ಹೃಷೀಕೇಶ ಕ್ಷೇತ್ರ, ಇಷುಪಾತ ಕ್ಷೇತ್ರ, ಪ್ರಭೃತಿ

೧ ಈ ಅರಸನು ಬ್ರಾಹ್ಮಣರ ಜೊತೆಯಲ್ಲಿ ಇದ್ದುದರಿಂದ ಈತನು ವೈದಿಕ ಧರ್ಮದ ರಾಜನಾಗಿರಬೇಕೆಂಬುದು ಸ್ಪಷ್ಟವಾಗಿದೆ. ಅರ್ಥಾತ್ ಆ ಕಾಲಕ್ಕೆ ಬಂಗಾಲದಲ್ಲಿ ಪ್ರಾಯಶಃ ವಸುಚ ರಾಜನ ತಂದೆಯು ಆಳುತ್ತಿರಬೇಕು.

ಕ್ಷೇತ್ರಗಳಿಗೆ, ಹೋಗಿ, ಶ್ರೀ ಪರಶುರಾಮ ದೇವರನ್ನು ಸ್ಮರಿಸಿದರು. ತರು ವಾಯ ಗೋವಾ ಪಟ್ಟಣಕ್ಕೆ ಬಂದರು. "ಈ ಸ್ಥಳದಲ್ಲಿ ಶ್ರೀ ಮಧ್ವಾಚಾರ್ಯರು, ಶಂಕರನೆಂಬ ಬ್ರಾಹ್ಮಣನು ತಂದುಕೊಟ್ಟ ನಾಲ್ಕು ಸಾವಿರ ಬಾಳೆ ಹಣ್ಣುಗಳನ್ನು ತಿಂದು, ಮೇಲೆ ೩೦ ಕೊಡ ಹಾಲನ್ನು ಕುಡಿದರು!!" ಎಂದು ವರ್ಣಿಸಿ, ಸುಮಧ್ವವಿಜಯಕಾರರು, ಅತಿಶಯೋಕ್ತಿಯ ವ್ಯಾಜದಿಂದ ಶ್ರೀಮದಾಚಾರ್ಯರ ಜಠರಾಗ್ನಿಯು ಅತ್ಯಂತ ಜಾಜ್ವಲ್ಯಮಾನವಾಗಿತ್ತೆಂಬುದನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ.

ಶ್ರೀ ಮಧ್ವಾಚಾರ್ಯರು ಈ ಗೋವಾ ಪಟ್ಟಣದಿಂದ ಹೊರಟು, ಉಡುಪಿ ಕ್ಷೇತ್ರಕ್ಕೆ ಬಂದು ತಲಪಿದರು. ಬದರಿಕಾಶ್ರಮದ ೨ನೆಯ ಯಾತ್ರೆಯು ಪರಿಪೂರ್ಣವಾಯಿತು.

ಚೋಳ ದೇಶದಿಂದ ಉಡುಪಿಗೆ ಬಂದಿದ್ದ ಶ್ರೀ ಪದ್ಮತೀರ್ಥ, ಶ್ರೀ ಪುಂಡರೀಕಪುರಿ ಎಂಬ ಇಬ್ಬರು ಅದ್ವೈತಮತಾನುಯಾಯಿಗಳಾದ ಯತಿವರ್ಯರನ್ನು ಶ್ರೀಮದಾನಂದತೀರ್ಥರು ನಿರಾಯಾಸದಿಂದ ಜಯಿಸಿದರು

# ೧೧ನೆಯ ಅಧ್ಯಾಯ

## ಶ್ರೀ ಮಧ್ವ-ತ್ರಿವಿಕ್ರಮ ಸಂವಾದ ಮತ್ತು ಗ್ರಂಥರಚನೆ.

ಶ್ರೀ ಮಧ್ವಾಚಾರ್ಯರು ಉಡುಪಿಯಿಂದ ಕೊಡಿಪಾಡಿ ಗ್ರಾಮಕ್ಕೆ ಬಂದು, ಅಲ್ಲಿ ಚಾತುರ್ಮಾಸ್ಯ ವ್ರತವನ್ನು ನೆರವೇರಿಸಿಕೊಂಡು, ಪದ್ಮತೀರ್ಥನು ತೆಗೆದುಕೊಂಡು ಹೋಗಿದ್ದ ತಮ್ಮ ಗ್ರಂಥಗಳನ್ನು ಪಡೆದು, ಶಿಷ್ಯರೊಡನೆ ಕೊಡಿಪಾಡಿ ಗ್ರಾಮದಿಂದ ಸಹ್ಯ ಪರ್ವತಕ್ಕೆ ಹೋಗಲು, ಕುಂಬಳೆ[೧] ಅರಸನಾದ ಜಯಸಿಂಹರಾಜನು ಶ್ರೀಮದಾಚಾರ್ಯರ ಸನ್ನಿಧಿಗೆ ತನ್ನ ರಾಯಭಾರಿಯನ್ನು ಕಳುಹಿಸಿ, "ವಿಷ್ಣುಮಂಗಳಕ್ಕೆ ತಾವು ದಯಮಾಡಿಸಬೇಕೆಂ"ದು ತನ್ನ ಪ್ರಾರ್ಥನೆಯನ್ನು ಸಮರ್ಪಿಸಿದನು. ಈ ರಾಜನ ಪ್ರಾರ್ಥನೆಯ ಮೇರೆಗೆ ಶ್ರೀಮದಾನಂದತೀರ್ಥರು ಆ ಸಹ್ಯ ಪರ್ವತದಿಂದ ವಿಷ್ಣುಮಂಗಳಕ್ಕೆ ತೆರಳಿದರು. ಮಾರ್ಗಕ್ರಮಣ ಮಾಡುತ್ತ ಮಾಡುತ್ತ '**ಕಬೆನಾಡು**' ಎಂಬ ಜಯಸಿಂಹರಾಜನ ದೇಶಕ್ಕೆ ಬಂದು, ಮಾರ್ಗದಲ್ಲಿ ಕಂಡುಬಂದ **ಮದನಾಧಿಪತಿ**ಯೆಂಬ ದೇವರ ಗುಡಿಯಲ್ಲಿ ವಿಶ್ರಮಿಸಿದರು. ಆಚಾರ್ಯರು ಮದನಾಧಿಪತಿ ದೇವಾಲಯದಲ್ಲಿ ಅಂದಿನ ರಾತ್ರಿ ವಾಸ ಮಾಡಿ, ಉಷಃ ಕಾಲದಲ್ಲಿ ಎದ್ದು ಸ್ನಾನ, ಸಂಧ್ಯಾವಂದನ, ಜಪ, ಧ್ಯಾನ ಮೊದಲಾದ ಕೃತ್ಯಗಳನ್ನು ನೆರವೇರಿಸಿಕೊಂಡು, ಪುನಃ ಮುಂದಕ್ಕೆ ಹೊರಡಲುದ್ಯುಕ್ತರಾದರು. ಹೀಗೆ ಪ್ರಯಾಣ ಮಾಡುತ್ತಿರಲು, ಜಯಸಿಂಹ ಮಹಾರಾಜನು ಮದನೇಶ್ವರ ದೇವಾಲಯಪ್ರದೇಶದಲ್ಲಿ ಬರುತ್ತಿರುವ ಈ ಮಧ್ವಾಚಾರ್ಯರನ್ನು ಬೇಗನೆ ಎದುರುಗೊಳ್ಳುವುದಕ್ಕಾಗಿ ಬಂದನು. ಈ ಜಯಸಿಂಹ ಭೂಪತಿಯು, ಆಚಾರ್ಯರು ಬರುವ ಮೊದಲೇ ತನ್ನ ವಾಹನದಿಂದಿಳಿದು, ಮಾರ್ಗದಲ್ಲಿದ್ದ ತನ್ನ ಸೈನಿಕರನ್ನು ದೂರದಲ್ಲಿ

---

೧ ಈ ಕುಂಬಳೆ ರಾಜಧಾನಿಯು ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡು ತಾಲೂಕಿನಲ್ಲಿದೆ.

ನಿಲ್ಲಿಸಿ, ಕೆಲವು ಬ್ರಾಹ್ಮಣರನ್ನು ಕರೆದುಕೊಂಡು, ಪರಮಪುಣ್ಯಶ್ಲೋಕರಾದ ಆಚಾರ್ಯರ ಪಾದಾರವಿಂದಗಳ ಸನ್ನಿಧಿಯಲ್ಲಿ ಬಂದು ನಮಸ್ಕರಿಸಿದನು. ಆಗ ಶ್ರೀಮದಾಚಾರ್ಯರು, ವಿನಯಶಾಲಿಯಾದ ಜಯಸಿಂಹರಾಜನೊಡನೆ ವಿಷ್ಣುಮಂಗಳವೆಂಬ ದೇವಾಲಯಕ್ಕೆ ಬೇಗನೆ ಬಂದರು. ಈ ಅರಸನು ಪರಮಭಕ್ತಿಭಾವದಿಂದ ಶ್ರೀಮದಾಚಾರ್ಯರ ಸನ್ನಿಧಿಯಲ್ಲಿ ಆದರ ಸತ್ಕಾರಗಳನ್ನು ಸಮರ್ಪಿಸಿದನು.

ಇಂತಹ ಸಂಭ್ರಮದಲ್ಲಿ ಅದ್ವೈತ ಮತಾನುಯಾಯಿಯಾದ ತ್ರಿವಿಕ್ರಮ[೧]ಶಾಸ್ತ್ರಿಯೆಂಬ ದೊಡ್ಡ ಪಂಡಿತನು ಆಚಾರ್ಯರ ಸನ್ನಿಧಿಗೆ ಬಂದನು. ಈ ಪಂಡಿತನು, ಲಿಕುಚ ವಂಶದ ಅಂಗಿರ ಗೋತ್ರಜರಾದ ಸುಬ್ರಹ್ಮಣ್ಯಶಾಸ್ತ್ರಿಗಳ ಮಗನಾಗಿದ್ದು, ಅದ್ವೈತ ವೇದಾಂತದಲ್ಲಿ ನಿಷ್ಣಾತನಾಗಿದ್ದನು. ಆಚಾರ್ಯರು ಆ ವಿಷ್ಣುಮಂಗಳ ದೇವಾಲಯದಿಂದ '**ಕುಡಿಲು**' ಎಂಬ ದೇವಾಲಯಕ್ಕೆ ಬಂದು, ಅಲ್ಲಿ ಸೂತ್ರಭಾಷ್ಯ ಪ್ರವಚನವನ್ನು ಮಾಡಲಾರಂಭಿಸಿದರು. ಆಗ ಈ ತ್ರಿವಿಕ್ರಮ ಪಂಡಿತರು ಶ್ರೋತೃಗಳಾಗಿ ಕುಳಿತು, ವಾಕ್ಯಾರ್ಥವನ್ನು ಪ್ರಾರಂಭ ಮಾಡಿದರು. ಮುಂದೆ ಕ್ರಮೇಣ ಶ್ರೀಮದಾಚಾರ್ಯರಿಗೂ ತ್ರಿವಿಕ್ರಮ ಪಂಡಿತರಿಗೂ ವಾದವಿವಾದವು ನಿರಂತರವಾಗಿ ೧೫ ದಿವಸಗಳ ವರೆಗೆ ಜರುಗಿತು.

ಈ ವಾದದಲ್ಲಿ ಶ್ರೀಮದಾಚಾರ್ಯರು ಚಾರ್ವಾಕ ಮತವನ್ನೂ ನಿರೀಶ್ವರ ಭಾಟ್ಟ, ಪ್ರಾಭಾಕರರೆಂಬ ಮೀಮಾಂಸಕರ ಮತವನ್ನೂ ಖಂಡಿಸಿದರು. ಇದೇ ಮೇರೆಗೆ ಅದ್ವೈತ ಮತವನ್ನು ಖಂಡಿಸಿದ್ದರಿಂದ ತ್ರಿವಿಕ್ರಮ ಪಂಡಿತರು ವಾದದಲ್ಲಿ ಪರಾಜಿತರಾಗಿ, ಆಚಾರ್ಯರ ಶಿಷ್ಯತ್ವವನ್ನು ವಹಿಸಿದರು. ಇಷ್ಟು ಮಾತ್ರವೇ ಅಲ್ಲ, ಶ್ರೀಮದಾಚಾರ್ಯರ ಅಪ್ಪಣೆಯಂತೆ ಬ್ರಹ್ಮಸೂತ್ರ ಭಾಷ್ಯವನ್ನು ಸಂಪೂರ್ಣವಾಗಿ ಚೆನ್ನಾಗಿ ಅಭ್ಯಾಸಮಾಡಿ, ಈ ಭಾಷ್ಯಕ್ಕೆ "**ತತ್ತ್ವಪ್ರದೀಪಿಕಾ**" ಎಂಬ ಟೀಕಾ ಗ್ರಂಥವನ್ನು ರಚಿಸಿದರು.

---

೧ ಈ ತ್ರಿವಿಕ್ರಮಶಾಸ್ತ್ರಿಗಳು ಕಾಸರಗೋಡು ತಾಲೂಕಿನಲ್ಲಿಯ ಕಾವು ಗೋವಿಂದವೆಂಬ ಗ್ರಾಮದಲ್ಲಿರುತ್ತಿದ್ದರು. ವಿಷ್ಣುಮಂಗಲ ದೇವಾಲಯವೂ ಇದೇ ತಾಲೂಕಿನಲ್ಲಿದೆ.

ಬ್ರಹ್ಮಸೂತ್ರ ಭಾಷ್ಯಾರ್ಥವನ್ನು ಇನ್ನೊಂದಿಷ್ಟು ವಿಶದಮಾಡಿ, ಬೇರೊಂದು ಗ್ರಂಥವನ್ನು ನಿರ್ಮಿಸಬೇಕೆಂದು ತ್ರಿವಿಕ್ರಮ ಪಂಡಿತರು ಆಚಾರ್ಯರನ್ನು ಪ್ರಾರ್ಥಿಸಲು, ಶ್ರೀಮದಾಚಾರ್ಯರು **'ಅನುವ್ಯಾಖ್ಯಾನ'** ಎಂಬ ಗ್ರಂಥವನ್ನು ರಚಿಸಿದರು.

ಶ್ರೀಮದಾನಂದತೀರ್ಥರು ರಚಿಸಿದ ಗ್ರಂಥಗಳು.

**( ೧ ) ಶ್ರೀ ಭಗವದ್ಗೀತಾಭಾಷ್ಯಂ**

ಶ್ರೀಮದಾನಂದತೀರ್ಥರು ಮೊಟ್ಟಮೊದಲು ರಚಿಸಿದ ಗ್ರಂಥವು ಇದೇ. ಈ ಭಾಷ್ಯಕ್ಕೆ (೧) ಶ್ರೀ ಜಯತೀರ್ಥ ಭಿಕ್ಷುವಿರಚಿತ 'ಪ್ರಮೇಯ ದೀಪಿಕಾ' (೨) ಶ್ರೀ ರಾಘವೇಂದ್ರ ಯತಿಕೃತ 'ಗೀತಾವಿವೃತಿಃ' (೩) ಶ್ರೀ ವಾದಿರಾಜ ಯತಿಕೃತ 'ಭಾರತ ಲಕ್ಷಾಲಂಕಾರ' (೪) ಆಜ ಆಚಾರ್ಯ ಕೃತ 'ಗೀತಾ ವಿವೃತಿಃ' (೫) ಕೊಯೀಮತ್ತೂರು ಪದ್ಮನಾಭಾಚಾರ್ಯಕೃತ 'ಗೀತಾ ವ್ಯಾಖ್ಯಾನ' ಈ ಪ್ರಕಾರ ೫ ಟೀಕಾ ಗ್ರಂಥಗಳಿವೆ.

**( ೨ ) ಶ್ರೀ ಬ್ರಹ್ಮಸೂತ್ರಭಾಷ್ಯಂ**

ಈ ಭಾಷ್ಯಕ್ಕೆ (೧) ತ್ರಿವಿಕ್ರಮ ಪಂಡಿತಾಚಾರ್ಯ ವಿರಚಿತ 'ತತ್ತ್ವಪ್ರದೀಪಿಕಾ' (೨) ಶ್ರೀ ಜಯತೀರ್ಥಭಿಕ್ಷುವಿರಚಿತ 'ತತ್ತ್ವಪ್ರಕಾಶಿಕಾ' (೩) ಶ್ರೀ ರಾಘವೇಂದ್ರೀಯ 'ತಂತ್ರದೀಪಿಕಾ' (೪) ಶ್ರೀ ಜಗನ್ನಾಥ ಯತಿಕೃತ 'ಭಾಷ್ಯದೀಪಿಕಾ' (೫) ಶ್ರೀ ರಾಘವೇಂದ್ರೀಯ ನ್ಯಾಯ ಮುಕ್ತಾವಳೀ (೬) ಶ್ರೀ ವಿಜಯೀಂದ್ರ ತೀರ್ಥೀಯ 'ತತ್ತ್ವಮಾಣಿಕ್ಯ ಪೇಟಿಕಾ' (೭) ಶ್ರೀ ವಾದಿರಾಜೀಯ 'ಶ್ರೀ ಬ್ರಹ್ಮಸೂತ್ರಾರ್ಥ ನಿಬದ್ಧ ಅಧಿಕರಣ ನಾಮಾವಲೀ' (೮) ಶ್ರೀ ಧೀರೇಂದ್ರ ಯತಿಕೃತ 'ವಿಷಯವಾಕ್ಯ ಸಂಗ್ರಹ' (೯) ದಾಸಾಚಾರ್ಯಕೃತ 'ಅಧಿಕರಣಾರ್ಥ ಸಂಗ್ರಹ' (೧೦) ಶ್ರೀ ಮುಷ್ಣ ಸುಬ್ಬರಾಯ ಕೃತ 'ಸೂತ್ರಾರ್ಥ ಮಣಿಮಂಜರೀ' (೧೧) 'ಭಾಷ್ಯಘಟಿಕ ಶ್ರುತ್ಯರ್ಥ ರತ್ನಮಾಲಾ' ಈ ಪ್ರಕಾರ ೧೧ ಟೀಕಾ ಗ್ರಂಥಗಳಿವೆ.

**( ೩ ) ಶ್ರೀ ಅನುವ್ಯಾಖ್ಯಾನಂ**

ಈ ಗ್ರಂಥಕ್ಕೆ (೧) ತ್ರಿವಿಕ್ರಮ ಪಂಡಿತಾಚಾರ್ಯ ವಿರಚಿತ 'ನಯ ಚಂದ್ರಿಕಾ' (೨) ಶ್ರೀ ಪದ್ಮನಾಭತೀರ್ಥ ವಿರಚಿತ 'ಸನ್ನ್ಯಾಯ ರತ್ನಾವಳೀ'

(೩) ಶ್ರೀ ಜಯತೀರ್ಥ ಭಿಕ್ಷುವಿರಚಿತ 'ನ್ಯಾಯಸುಧಾ' ಎಂಬ ಮೂರು ಟೀಕಾ ಗ್ರಂಥಗಳಿವೆ.

## (೪) ಶ್ರೀ ಅಣುಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀ ರಾಘವೇಂದ್ರಯತಿವಿರಿಚಿತ 'ತತ್ತ್ವಮಂಜರೀ' (= ತತ್ತ್ವವಿವೃತಿ) (೨) ಶ್ರೀನಿವಾಸತೀರ್ಥೀಯ (೩) ಶ್ರೀ ರುಘುನಾಥ ತೀರ್ಥೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೫) ಶ್ರೀ ನ್ಯಾಯ ವಿವರಣಂ

ಈ ಗ್ರಂಥಕ್ಕೆ (೧) ಶ್ರೀ ಜಯತೀರ್ಥ ಭಿಕ್ಷುವಿರಚಿತ 'ನ್ಯಾಯವಿವರಣ ಪಂಚಿಕಾ' (೨) ಶ್ರೀ ರಘೂತ್ತಮ ಯತಿಕೃತ 'ನ್ಯಾಯವಿವರಣ ಭಾವ ಬೋಧ' ಎಂಬ ಎರಡು ಟೀಕಾ ಗ್ರಂಥಗಳಿವೆ.

## (೬) ಶ್ರೀಗೀತಾತಾತ್ಪರ್ಯ ನಿರ್ಣಯ

ಈ ಗ್ರಂಥಕ್ಕೆ (೧) ಶ್ರೀ ಜಯತೀರ್ಥಭಿಕ್ಷು ವಿರಚಿತ 'ನ್ಯಾಯ ದೀಪಿಕಾ' ಎಂಬುದೊಂದು ಟೀಕಾ ಗ್ರಂಥವೂ, ಇದಕ್ಕೆ ಪುನಃ ಶ್ರೀನಿವಾಸ ವಿರಚಿತ 'ನ್ಯಾಯದೀಪ ಕಿರಣಾವಳೀ' ಮತ್ತು ಶ್ರೀ ರಾಘವೇಂದ್ರೀಯ ಎಂಬೆರಡು ಉಪ ಟೀಕಾ ಗ್ರಂಥಗಳೂ ಎಂದರೆ ಟಿಪ್ಪಣಿಗಳೂ ಇವೆ.

## (೭) ಶ್ರೀ ಮಹಾಭಾರತ ತಾತ್ಪರ್ಯನಿರ್ಣಯ

ಈ ಗ್ರಂಥಕ್ಕೆ (೧) ಶ್ರೀ ರಾಘವೇಂದ್ರ ಯತಿಕೃತ 'ಸಾರಸಂಗ್ರಹ' (೨) ಶ್ರೀ ವಾದಿರಾಜ ಯತಿಕೃತ 'ಭಾವ ಪ್ರಕಾಶಿಕಾ' (೩) ಜನಾರ್ದನ ಭಟ್ಟ ವಿರಚಿತ 'ಪದಾರ್ಥ ದೀಪಿಕಾ' (೪) ಶ್ರೀ ಶ್ರೀನಿವಾಸತೀರ್ಥೀಯ (೫) ಶ್ರೀ ವೇದಾಂಗತೀರ್ಥೀಯ (೬) ವರದರಾಜೀಯ ಎಂಬ ಆರು ಟೀಕಾ ಗ್ರಂಥಗಳಿವೆ.

## (೮) ಶ್ರೀ ಯಮಕ ಭಾರತಂ

ಈ ಗ್ರಂಥಕ್ಕೆ (೧) ಶ್ರೀವಿಜಯಧ್ವಜೀಯ (೨) ತಮ್ಮಣ್ಣಭಟ್ಟೀಯ (೩) ವೆಂಕಟೇಶ್ವರೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೯) ಶ್ರೀಭಾಗವತ ತಾತ್ಪರ್ಯ ನಿರ್ಣಯ

ಈ ಗ್ರಂಥಕ್ಕೆ (೧) ನರಹರ್ಯಾಚಾರ್ಯಕೃತ 'ಭಾಗವತ ತಾತ್ಪರ್ಯ ದೀಪಿಕಾ' (೨) ಶ್ರೀ ಶ್ರೀನಿವಾಸತೀರ್ಥೀಯ (೩) ಶ್ರೀವಿಜಯಧ್ವಜೀಯ

(೪) ಯದುಪತ್ಯಾಚಾರ್ಯಕೃತ ಟೀಕಾ ಎಂಬ ನಾಲ್ಕು ಟೀಕಾ ಗ್ರಂಥಗಳಿವೆ.

## (೧೦) ಶ್ರೀ ಶುಕ್ಲಯಜುರ್ವೇದಾಂತರ್ಗತ ಕಾಣ್ವಶಾಖೆಯ (ಸಂಹಿತೆಯಲ್ಲಿಯ) [೧]ಈಶಾವಾಸ್ಯೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀಮಜ್ಜಯತೀರ್ಥಭಿಕ್ಷುವಿರಚಿತ 'ಯಾಜ್ಞೀಯ ಮಂತ್ರಭಾಷ್ಯ ವಿವರಣಂ' (೨) ಶ್ರೀರಾಘವೇಂದ್ರಯತಿಕೃತ ಉಪನಿಷತ್ಖಂಡಾರ್ಥ (೩) ಶ್ರೀವರದ ತೀರ್ಥೀಯ ಎಂಬ ಮೂರು ಟೀಕಾಗ್ರಂಥಗಳಿವೆ.

## (೧೧) ಶ್ರೀ ಶುಕ್ಲಯಜುರ್ವೇದಾನ್ತರ್ಗತ ಕಾಣ್ವಶಾಖೆಯ (ಶತಪಥ ಬ್ರಾಹ್ಮಣದಲ್ಲಿಯ) ಬೃಹದಾರಣ್ಯಕೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀರಾಘವೇಂದ್ರಯತಿ ವಿರಚಿತ ಉಪನಿಷತ್ಖಂಡಾರ್ಥ (೨) ಶ್ರೀರಘೂತ್ತಮಯತಿಕೃತ 'ಉಪನಿಷತ್ಖಂಡಾರ್ಥ' (೩) ಶ್ರೀರಘೂತ್ತಮಯತಿಕೃತ 'ಪರಬ್ರಹ್ಮ ಪ್ರಕಾಶಿಕಾ' (ಭಾವಬೋಧ) (೪) ಶ್ರೀವರದತೀರ್ಥೀಯ ಎಂಬ ನಾಲ್ಕು ಟೀಕಾ ಗ್ರಂಥಗಳಿವೆ.

## (೧೨) ಶ್ರೀಕೃಷ್ಣಯಜುರ್ವೇದಾನ್ತರ್ಗತ ಕಠಶಾಖೆಯ (ಬ್ರಾಹ್ಮಣದಲ್ಲಿಯ) ಕಾಠಕೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀಜಯತೀರ್ಥಭಿಕ್ಷುಶಿಷ್ಯ ವ್ಯಾಸತೀರ್ಥ ವಿರಚಿತ ಟೀಕಾ (೨) ಶ್ರೀರಾಘವೇಂದ್ರಯತಿ ವಿರಚಿತ ಉಪನಿಷತ್ಖಂಡಾರ್ಥ (೩) ಶ್ರೀವೇದೇಶತೀರ್ಥ ವಿರಚಿತ ಉಪನಿಷತ್ಖಂಡಾರ್ಥ (೪) ಶ್ರೀವೇದೇಶ ತೀರ್ಥ ವಿರಚಿತ ಟೀಕಾ (೫) ಶ್ರೀವರದತೀರ್ಥೀಯ ಎಂಬ ಐದು ಟೀಕಾ ಗ್ರಂಥಗಳಿವೆ.

## (೧೩) ಶ್ರೀಕೃಷ್ಣಯಜುರ್ವೇದಾನ್ತರ್ಗತ ತೈತ್ತಿರೀಯ ಶಾಖೆಯ (ಬ್ರಾಹ್ಮಣದಲ್ಲಿಯ) ತೈತ್ತಿರೀಯೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀವ್ಯಾಸತೀರ್ಥಯತಿಕೃತ ಭಾಷ್ಯ ವಿವರಣ ಟೀಕಾ (೨) ಶ್ರೀರಾಘವೇಂದ್ರಯತಿಕೃತ ಉಪನಿಷತ್ಖಂಡಾರ್ಥ (೩) ಶ್ರೀ

[೧] ಈಶಾವಾಸ್ಯೋಪನಿಷತ್ತು ಸಕಲ ಉಪನಿಷತ್ತುಗಳಲ್ಲಿ ಜ್ಯೇಷ್ಠವಾದ ಉಪನಿಷತ್ತಾಗಿರುತ್ತದೆ. ಏಕೆಂದರೆ, ಈ ಉಪನಿಷತ್ತು ಸಂಹಿತೆಯಲ್ಲಿದೆ.

ಶ್ರೀನಿವಾಸತೀರ್ಥೀಯ ಉಪನಿಷತ್ಖಂಡಾರ್ಥ (೪) ಶ್ರೀ ಶ್ರೀನಿವಾಸ ತೀರ್ಥೀಯ 'ಪದಾರ್ಥ ದೀಪಿಕಾ ಟೀಕಾ' (೫) ಶ್ರೀನರಸಿಂಹ ಭಿಕ್ಷು ವಿರಚಿತ 'ಖಂಡಾರ್ಥ ಪ್ರಕಾಶಿಕಾ' (೬) ಶ್ರೀವರದತೀರ್ಥೀಯ ಎಂಬ ಆರು ಟೀಕಾ ಗ್ರಂಥಗಳಿವೆ.

## (೧೪) ಶ್ರೀಸಾಮವೇದಾನ್ತರ್ಗತ ತಾಂಡಿನ್ ಶಾಖೆಯ (ಛಾಂದೋಗ್ಯ ಬ್ರಾಹ್ಮಣದಲ್ಲಿಯ) ಛಾಂದೋಗ್ಯೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀರಾಘವೇಂದ್ರಯತಿ ವಿರಚಿತ ಉಪನಿಷತ್ಖಂದಾರ್ಥ (೨) ಶ್ರೀವೇದೇಶತೀರ್ಥ ವಿರಚಿತ ಉಪನಿಷತ್ಖಂಡಾರ್ಥ (೩) ಶ್ರೀ ವೇದೇಶೀಯ 'ಪದಾರ್ಥ ಕೌಮುದೀ' ನಾಮಕ ಟೀಕಾ (೪) ಶ್ರೀವರದ ತೀರ್ಥೀಯ ಎಂಬ ನಾಲ್ಕು ಟೀಕಾ ಗ್ರಂಥಗಳಿವೆ.

## (೧೫) ಶ್ರೀಸಾಮವೇದಾನ್ತರ್ಗತ ಜೈಮಿನೀಯ ಶಾಖೆಯ (ತಲವಕಾರ ಬ್ರಾಹ್ಮಣದಲ್ಲಿಯ) ಕೇನೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀವ್ಯಾಸತೀರ್ಥ ವಿರಚಿತ ಭಾಷ್ಯವಿವರಣ (೨) ರಾಘವೇಂದ್ರಯತಿಕೃತ ಉಪನಿಷತ್ಖಂಡಾರ್ಥ (೩) ಶ್ರೀವೇದೇಶೀಯ ಉಪ ನಿಷತ್ಖಂಡಾರ್ಥ (೪) ಶ್ರೀವೇದೇಶತೀರ್ಥ ವಿರಚಿತ ಭಾಷ್ಯ ವಿವರಣ (೫) ಶ್ರೀವರದತೀರ್ಥೀಯ ಎಂಬ ಐದು ಟೀಕಾ ಗ್ರಂಥಗಳಿವೆ.

## (೧೬) ಶ್ರೀ ಅಥರ್ವವೇದಾನ್ತರ್ಗತ ಪಿಪ್ಪಲಾದ ಶಾಖೆಯ (ಬ್ರಾಹ್ಮಣದಲ್ಲಿಯ) ಷಟ್ಪ್ರಶ್ನೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀಮುಜ್ಜಯತೀರ್ಥ ಭಿಕ್ಷು ವಿರಚಿತ ಟೀಕಾ (೨) ಶ್ರೀರಾಘವೇಂದ್ರಯತಿ ವಿರಚಿತ ಉಪನಿಷತ್ಖಂಡಾರ್ಥ (೩) ಶ್ರೀವರದ ತೀರ್ಥೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೧೭) ಶ್ರೀಅಥರ್ವವೇದಾನ್ತರ್ಗತ ಶೌನಕೀಯ ಶಾಖೆಯ (ಬ್ರಾಹ್ಮಣದಲ್ಲಿಯ) ಮುಂಡಕೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀವ್ಯಾಸತೀರ್ಥೀಯ ಭಾಷ್ಯ ಟೀಕಾ (೨) ಶ್ರೀ ರಾಘವೇಂದ್ರಯತಿ ವಿರಚಿತ ಉಪನಿಷತ್ಖಂಡಾರ್ಥ (೩) ಶ್ರೀನರಸಿಂಹ

ಭಿಕ್ಷು ವಿರಚಿತ 'ಶ್ರುತ್ಯರ್ಥ ಪ್ರಕಾಶಿಕಾ' (೪) ಶ್ರೀವರದತೀರ್ಥೀಯ (೫) ಶ್ರೀಉಮಾಪತೀಯ 'ಅಥರ್ವಣ ಭಾಷ್ಯ ವಿವರಣಂ' (೬) ಕೃಷ್ಣಾಚಾರ್ಯ ಕೃತ 'ಉಪನಿಷದ್ಭಾಷ್ಯ ವಿವರಣಂ' ಎಂಬ ಆರು ಟೀಕಾ ಗ್ರಂಥಗಳಿವೆ.

## (೧೮) ಶ್ರೀಅಥರ್ವವೇದಾನ್ತರ್ಗತ ಶೌನಕೀಯ ಶಾಖೆಯ (ಬ್ರಾಹ್ಮಣದಲ್ಲಿಯ) ಮಾಂಡೂಕ್ಯೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀರಾಘವೇಂದ್ರಯತಿ ವಿರಚಿತ ಉಪನಿಷತ್ಖಂಡಾರ್ಥ (೨) ಶ್ರೀವ್ಯಾಸತೀರ್ಥೀಯ ಉಪನಿಷತ್ಖಂಡಾರ್ಥ, (೩) ಶ್ರೀವ್ಯಾಸತೀರ್ಥೀಯ ಭಾಷ್ಯಾರ್ಥ (೪) ಶ್ರೀ ಶ್ರೀನಿವಾಸತೀರ್ಥೀಯ ಉಪನಿಷತ್ಖಂಡಾರ್ಥ (೫) ಶ್ರೀ ಶ್ರೀನಿವಾಸತೀರ್ಥೀಯ 'ಪದಾರ್ಥದೀಪಿಕಾ' ಭಾಷ್ಯಾರ್ಥ (೬) ಶ್ರೀವರದತೀರ್ಥೀಯ ಎಂಬ ಆರು ಟೀಕಾ ಗ್ರಂಥಗಳಿವೆ.

## (೧೯) ಶ್ರೀಋಗ್ವೇದಾನ್ತರ್ಗತ ಆಶ್ವಲಾಯನ ಶಾಖೆಯ[೧] (ಐತರೇಯ ಬ್ರಾಹ್ಮಣದಲ್ಲಿಯ) ಐತರೇಯೋಪನಿಷದ್ಭಾಷ್ಯಂ

ಈ ಭಾಷ್ಯಕ್ಕೆ (೧) ಶ್ರೀರಾಘವೇಂದ್ರಯತಿಕೃತ ಉಪನಿಷತ್ಖಂಡಾರ್ಥ (೨) ಐತರೇಯ ತಾಮ್ರಪರ್ಣೀಯಂ (ಐತರೇಯ ಭಾಷ್ಯರತ್ನಮಾಲಾ) (೩) ಶ್ರೀರಾಮಚಂದ್ರತೀರ್ಥೀಯ (೪) ಶ್ರೀವರದತೀರ್ಥೀಯ (೫) ಶ್ರೀವಿಶ್ವೇಶತೀರ್ಥೀಯ ಎಂಬ ಐದು ಟೀಕಾ ಗ್ರಂಥಗಳಿವೆ.

## (೨೦) ಋಗ್ಭಾಷ್ಯ

(ಋಗ್ವೇದದ ಹತ್ತುಮಂಡಲಗಳಲ್ಲಿ ಒಟ್ಟು ೯೨೮ ಸೂಕ್ತಗಳಿದ್ದು, ಇವುಗಳಲ್ಲಿ ಮೊದಲನೆಯ ಮಂಡಲದಲ್ಲಿಯ ಪ್ರಾರಂಭದ ನಾಲ್ವತ್ತು ಸೂಕ್ತಗಳಿಗೆ ಮಾತ್ರ ಶ್ರೀಮಧ್ವಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ.)

ಈ ಭಾಷ್ಯಕ್ಕೆ (೧) ಶ್ರೀಮಜ್ಜಯತೀರ್ಥ ವಿರಚಿತ ಶ್ರೀಮಚ್ಚರಣಕೃತ ಟೀಕಾ (೨) ಋಕ್ಸೂಚೀ (೩) ಶ್ರೀಜಗನ್ನಾಥತೀರ್ಥೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

---

೧ ಋಗ್ವೇದದಲ್ಲಿ (೧) ಶಾಕಲ (೨) ಬಾಷ್ಕಲ (೩) ಆಶ್ವಲಾಯನ (೪) ಶಾಂಖಾಯನ (೫) ಮಾಂಡುಕೇಯ ಎಂಬ ಐದು ಶಾಖೆಗಳಿವೆ. ಋಗ್ವೇದಾನುಯಾಯೀ ಬ್ರಾಹ್ಮಣಗಳು ಎರಡು ಇವೆ. (೧) ಆಶ್ವಲಾಯನ ಶಾಖೆಯ 'ಐತರೇಯ ಬ್ರಾಹ್ಮಣ' (೨) ಶಾಂಖಾಯನ ಶಾಖೆಯ 'ಕೌಷೀತಕೀ ಬ್ರಾಹ್ಮಣ'

## (೨೧) ಪ್ರಮಾಣ ಲಕ್ಷಣಂ

ಈ ಗ್ರಂಥಕ್ಕೆ (೧) ಶ್ರೀಮಜ್ಜಯತೀರ್ಥ ಭಿಕ್ಷು ವಿರಚಿತ ಟೀಕಾ (೨) ವಿಜಯೀಂದ್ರೀಯ (೩) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೨೨) ಕಥಾ ಲಕ್ಷಣಂ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥ ಭಿಕ್ಷು ವಿರಚಿತ ಟೀಕಾ (೨) ಶ್ರೀವಿದ್ಯಾಧೀಶತೀರ್ಥೀಯ (೩) ರೊಟ್ಟೀವೆಂಕಟಾದ್ರಿ ಭಟ್ಟೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೨೩) ಉಪಾಧಿಖಂಡನಂ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ ಟೀಕಾ (೨) ಶ್ರೀವಾದಿರಾಜ ತೀರ್ಥೀಯ 'ಉಪನ್ಯಾಸ ರತ್ನಮಾಲಾ (೩) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೨೪) ಮಾಯಾವಾದ ಖಂಡನಂ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ 'ಮಾಯಾವಾದ ಖಂಡನ ವಿವರಣ' (೨) ಶ್ರೀವಾದಿರಾಜತೀರ್ಥೀಯ ಉಪನ್ಯಾಸ ರತ್ನಮಾಲಾ (೩) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೨೫) ಪ್ರಪಂಚ ಮಿಥ್ಯಾತ್ವಾನುಮಾನ ಖಂಡನಂ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ ಟೀಕಾ (೨) ಶ್ರೀವಾದಿರಾಜ ತೀರ್ಥೀಯ ಉಪನ್ಯಾಸ ರತ್ನಮಾಲಾ(೩) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೨೬) ತತ್ತ್ವ ಸಂಖ್ಯಾನಂ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ 'ತತ್ತ್ವಸಂಖ್ಯಾನ ವಿವರಣಂ' ಟೀಕಾ (೨) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬೆರಡು ಟೀಕಾ ಗ್ರಂಥ ಗಳಿವೆ.

## (೨೭) ತತ್ತ್ವ ವಿವೇಕ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ 'ತತ್ತ್ವವಿವೇಕ ವಿವರಣಂ' (೨) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬೆರಡು ಟೀಕಾ ಗ್ರಂಥಗಳಿವೆ.

## (೨೮) ತತ್ತ್ವೋದ್ಯೋತ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ 'ತತ್ತ್ವೋದ್ಯೋತವಿವರಣಂ' ಟೀಕಾ (೨) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬೆರಡು ಟೀಕಾ ಗ್ರಂಥಗಳಿವೆ.

## (೨೯) ಕರ್ಮನಿರ್ಣಯ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ ಟೀಕಾ (೨) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬೆರಡು ಟೀಕಾ ಗ್ರಂಥಗಳಿವೆ.

## (೩೦) ವಿಷ್ಣು ತತ್ತ್ವನಿರ್ಣಯ

ಈ ಗ್ರಂಥಕ್ಕೆ (೧) ಶ್ರೀಜಯತೀರ್ಥೀಯ ಟೀಕಾ (೨) ರೊಟ್ಟೀ ವೆಂಕಟಾದ್ರಿ ಭಟ್ಟೀಯ ಎಂಬೆರಡು ಗ್ರಂಥಗಳಿವೆ.

## (೩೧) ನರಸಿಂಹ ನಖ ಸ್ತೋತ್ರ

ಈ ಗ್ರಂಥಕ್ಕೆ (೧) ಶ್ರೀವಿಶ್ವಪತಿತೀರ್ಥೀಯ ವ್ಯಾಖ್ಯಾನ (೨) ಶ್ರೀವೇದಾತ್ಮಯತಿ ವಿರಚಿತ ವ್ಯಾಖ್ಯಾನ (೩) ಛಲಾರಿ ಶೇಷಾಚಾರ್ಯರ ವ್ಯಾಖ್ಯಾನ ಎಂಬ ಮೂರು ಟೀಕಾ ಗ್ರಂಥಗಳಿವೆ.

## (೩೨) ದ್ವಾದಶಸ್ತೋತ್ರ

ಈ ಗ್ರಂಥಕ್ಕೆ (೧) ಶ್ರೀವಿಶ್ವಪತಿತೀರ್ಥೀಯ ವ್ಯಾಖ್ಯಾನ (೨) ಶ್ರೀಪುಣ್ಯಶ್ರವಣತೀರ್ಥೀಯ(೩) ಜನಾರ್ದನ ಭಟ್ಟೀಯ (೪) ಛಲಾರಿ ನರಸಿಂಹಾಚಾರ್ಯಕೃತ ವ್ಯಾಖ್ಯಾನ (೫) ಕೊಯಮುತ್ತೂರು ಪದ್ಮನಾಭಾಚಾರ್ಯಕೃತ ವ್ಯಾಖ್ಯಾನ ಎಂಬ ಐದು ಗ್ರಂಥಗಳಿವೆ.

## (೩೩) ಕೃಷ್ಣಾಮೃತ ಮಹಾರ್ಣವ

ಈ ಗ್ರಂಥಕ್ಕೆ (೧) ಕೃಷ್ಣಾಚಾರ್ಯಕೃತ ವ್ಯಾಖ್ಯಾನ (೨) ವಿಟ್ಠಲಾಚಾರ್ಯ ಪುತ್ರ ಶ್ರೀನಿವಾಸ ವಿರಚಿತ ಟೀಕಾ ಎಂಬೆರಡು ಟೀಕಾಗ್ರಂಥಗಳಿವೆ.

## (೩೪) ತಂತ್ರಸಾರ

ಈ ಗ್ರಂಥಕ್ಕೆ (೧) ಶ್ರೀಸುಮತೀಂದ್ರತೀರ್ಥೀಯ (೨) ತಮ್ಮಣ್ಣೀಯ (೩) ಛಲಾರಿ ಶೇಷಾಚಾರ್ಯಕೃತ ವ್ಯಾಖ್ಯಾನ (೪) ತಂತ್ರಸಾರ ಸಂಗ್ರಹ ರೂಪ ಪದ್ಯಮಾಲಾ ಎಂಬ ನಾಲ್ಕು ಟೀಕಾ ಗ್ರಂಥಗಳಿವೆ.

## (೩೫) ಸದಾಚಾರ ಸ್ಮೃತಿ

ಈ ಗ್ರಂಥಕ್ಕೆ (೧) ಶ್ರೀಶ್ರೀನಿವಾಸತೀರ್ಥೀಯ 'ಶರ್ಕರಾ' (೨) ನಾರಾಯಣಾಚಾರ್ಯಕೃತ ವೈಷ್ಣವಾಚಾರ ಪದ್ಧತಿ (೩) ಆಯಿ ನರಹರ್ಯಾಚಾರ್ಯಕೃತ ವ್ಯಾಖ್ಯಾರ್ಥವಿವೃತಿಃ ಎಂಬ ಮೂರು ಟೀಕಾ ಗ್ರಂಥಗಳುಂಟು.

## (೩೬) ಯತಿಪ್ರಣವಕಲ್ಪಃ

## (೩೭) ಜಯಂತೀ ನಿರ್ಣಯ

[1]ಇವಲ್ಲದೆ ಈ ೩೭ ಮೂಲ ಗ್ರಂಥಗಳ ಟೀಕಾ ಗ್ರಂಥಗಳಿಗೆ ಹಲ ಟಿಪ್ಪಣಿ ಗ್ರಂಥಗಳಿವೆ. ಅವುಗಳನ್ನು ವಿಸ್ತಾರಭಯಕ್ಕೋಸ್ಕರ ಇಲ್ಲಿ ಉಲ್ಲೇಖ ಮಾಡಿರುವುದಿಲ್ಲ.

ಶ್ರೀಮಧ್ವಾಚಾರ್ಯರು ಜಯಸಿಂಹ ರಾಜನಿಂದ ಆತಿಥ್ಯವನ್ನು ಸ್ವೀಕರಿಸುತ್ತ ವಿಷ್ಣುಮಂಗಳ ಗ್ರಾಮದಲ್ಲಿ ಗ್ರಂಥಗಳನ್ನು ರಚಿಸುತ್ತಿರಲು, ಇತ್ತ ಪಾಜಕಕ್ಷೇತ್ರದಲ್ಲಿ ಆಚಾರ್ಯರ ತಮ್ಮಂದಿರು ಸಕಲಶಾಸ್ತ್ರ ಪಾರಂಗತರಾಗಿ, ಮಾತಾಪಿತೃಗಳ ಸೇವೆಯನ್ನು ಮಾಡುತ್ತ ಪುತ್ರಧರ್ಮವನ್ನು ಚೆನ್ನಾಗಿ ಪರಿಪಾಲಿಸುತ್ತಿದ್ದರು. ಅಷ್ಟರಲ್ಲಿ ಕಾಲಧರ್ಮಕ್ಕನುಸರಿಸಿ, ಇವರ ತಂದೆತಾಯಿಗಳಿಬ್ಬರೂ ಎಂದರೆ ಮಧ್ಯಗೇಹ ಭಟ್ಟರೂ ವೇದವತಿ ದೇವಿಯರೂ ವೈಕುಂಠಕ್ಕೆ ತೆರಳಿದರು. ಇಷ್ಟೇ ಅಲ್ಲ ಇದೇ ಕಾಲಕ್ಕೆ ದೈವ ದುರ್ವಿಲಾಸದಿಂದ ಮನೆಯಲ್ಲಿದ್ದ ಧನಧಾನ್ಯ ಸಂಪತ್ತುಗಳೂ ಸಹ ನಷ್ಟವಾಗಿ ಹೋಗಲು, ಆಚಾರ್ಯರ ಅನುಜರು ವಿರಕ್ತರಾಗಿ ಶ್ರೀಮಧ್ವಾಚಾರ್ಯರ ಸನ್ನಿಧಿಗೆ ಬಂದು ಶರಣಾಗತರಾದರು. ಮತ್ತು ನಡೆದ ಮನೆಯ ವೃತ್ತಾಂತವನ್ನೆಲ್ಲ ಹೇಳಿ ತಮಗೆ ಸನ್ಯಾಸಾಶ್ರಮವನ್ನು ದಯಪಾಲಿಸಬೇಕೆಂದು ಅಣ್ಣಂದಿರಾದ ಈ ಆಚಾರ್ಯ ಮಹಾಶಯರನ್ನು ಕುರಿತು ಪ್ರಾರ್ಥಿಸಿದರು. ಆಗ ಶ್ರೀಮಧ್ವಾಚಾರ್ಯರು ತಮ್ಮನನ್ನು ಕುರಿತು "ಯೋಗ್ಯಕಾಲದಲ್ಲಿ ನಿನಗೆ ಸನ್ಯಾಸಾಶ್ರಮವನ್ನು ಕೊಡುತ್ತೇನೆ; ಈಗ ಮನೆಗೆ ಹೋಗಿ ಶಾಂತಚಿತ್ತದಿಂದ ಇರು." ಎಂದು ಹೇಳಿ ಕಳುಹಿಸಿದರು.

---

೧ ಸಾರಾಂಶ, ಶ್ರೀಮದಾಚಾರ್ಯರು ಒಟ್ಟು ಮೂವತ್ತೆರಡು ಸಾವಿರ (೩೨೦೦೦) ಗ್ರಂಥ ವಿಸ್ತಾರವಾದ ಮೂವತ್ತೇಳು ಗ್ರಂಥಗಳನ್ನು ರಚಿಸಿದರು.

ತದನಂತರ ಪರಮಪೂಜ್ಯರಾದ ಶ್ರೀಮದಾನಂದತೀರ್ಥರು ಅವತಾರ ಸ್ಥಳವಾದ ಉಡುಪಿ ಕ್ಷೇತ್ರಕ್ಕೆ ಬಂದು, ಅಲ್ಲಿ ತಮ್ಮ ಅವತಾರ ಕಾರ್ಯಗಳನ್ನು ಮಾಡಲುಪಕ್ರಮಿಸಿದರು. ಅರ್ಥಾತ್ ಆಚಾರ್ಯರು ದಿನಾಲು ಪಾಠಪ್ರವಚನಗಳಿಂದ ವಿಷ್ಣುಭಕ್ತಿಯ ಪ್ರಸಾರವನ್ನೂ ದ್ವೈತ ಸಿದ್ಧಾಂತದ ಪ್ರಚಾರವನ್ನೂ ಮಾಡುತ್ತ ಪರಮಾತ್ಮನ ನಿರಂತರ ಸೇವೆಯಲ್ಲಿ ರತರಾಗಿ ಆನಂದದಿಂದ ಕಾಲಕ್ರಮಣ ಮಾಡುತ್ತಿದರು.

---

# ೧೨ನೆಯ ಅಧ್ಯಾಯ

## ಕಾಣ್ವತೀರ್ಥದ ಮಹಿಮೆಯು

ಉಡುಪಿಯಿಂದ ದಕ್ಷಿಣಕ್ಕೆ ನಾಲ್ವತ್ತೈದು ಮೈಲು ದೂರದಲ್ಲಿ **ಕಾಣ್ವತೀರ್ಥ**ವೆಂಬ ಸುಪ್ರಸಿದ್ಧವಾದ ಕ್ಷೇತ್ರವಿದೆ. ಅಲ್ಲಿ **ಕಾಣ್ವತೀರ್ಥ**ವೆಂಬ ಪರಮಪವಿತ್ರವಾದ ಪುಷ್ಕರಿಣಿಯಿದೆ ಈ ಕ್ಷೇತ್ರದಲ್ಲಿ ಶ್ರೀಮನ್ಮಧ್ವಾಚಾರ್ಯರು ಚಾತುರ್ಮಾಸ್ಯ ಕುಳಿತಿದ್ದರೆಂದು ಸುಮಧ್ವವಿಜಯಕಾರರು ಹೀಗೆ ಹೇಳಿದ್ದಾರೆ.

ಇತ್ಥಂ ಸದ್ಭಿಃ ಸದ್ಭಿರರ್ಚ್ಯೋ ಧರಾಯಾಂ ಚಕ್ರೇವಾಸಂ ಶೇಷಶಯ್ಯೇ
ಶಯಾನೇ ।
ಗ್ರಾಮೇ ವಾತೈಃ ಪಾವಿತೇ **ಕಾಣ್ವತೀರ್ಥೈ**ರ್ಭಕ್ತಪ್ರೀತ್ಯಾ
ಸನ್ಮಠೇऽಸೂನಬೋಧಃ ॥
(ಸುಮಧ್ವವಿಜಯ ೧೫–೧೪೦)

ಅರ್ಥ:— ಭೂಮಿಯಲ್ಲಿ ಹೀಗಿರತಕ್ಕ ಎಂದರೆ ಭಕ್ತ್ಯಾದಿ ಗುಣಗಳುಳ್ಳ ಸಜ್ಜನರಿಂದ ಸನ್ಮಾನಿಸಲ್ಪಟ್ಟ ಶ್ರೀಮಧ್ವಾಚಾರ್ಯರು, ಶೇಷಶಾಯಿಯಾದ ಶ್ರೀಹರಿಯು ನಿದ್ರಿಸಲಾರಂಭಿಸಲು ಅರ್ಥಾತ್ ಚಾತುರ್ಮಾಸ್ಯವಾರಂಭವಾಗಲು, ಕಾಣ್ವತೀರ್ಥೋದಕದ ಮೇಲೆ ಹಾಯಿದು ಬಂದಂಥ ಅತಏವ ಕಾಣ್ವತೀರ್ಥದ ಪವಿತ್ರವಾದ ಗಾಳಿಯಿಂದ ಪುನೀತವಾದಂಥ ಗ್ರಾಮದಲ್ಲಿ ಎಂದರೆ ಕಾಣ್ವತೀರ್ಥದ ದಂಡೆಯ ಮೇಲಿದ್ದ ಗ್ರಾಮದಲ್ಲಿ ಇರುವ ಉತ್ತಮವಾದ ಮಠದಲ್ಲಿ ಚಾತುರ್ಮಾಸ್ಯವ್ರತವನ್ನು ಕೈಕೊಂಡು ಭಕ್ತರಲ್ಲಿ ಪ್ರೀತಿಯಿಂದ ವಾಸಮಾಡಿದರು.

ಶ್ರೀಮದಾಚಾರ್ಯರು ಕಾಣ್ವತೀರ್ಥೋದಕದ ಮೇಲೆ ಹಾಯಿದು ಬಂದಂಥ ಗಾಳಿಯೇ ಪರಮ ಪವಿತ್ರವಾದದ್ದೆಂದು ಭಾವಿಸಿರುವುದನ್ನು ನೋಡಿದರೆ, ಇವರ ಹೃದಯದಲ್ಲಿ ಕಾಣ್ವತೀರ್ಥದ ಬಗ್ಗೆ ಅತ್ಯಂತ ಉತ್ಕಟ

ವಾದ ಪೂಜ್ಯಬುದ್ಧಿಯೂ ಆತ್ಮೀಯ ಭಾವನೆಯೂ ವಾಸವಾಗಿತ್ತೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಇದೇ ಮೇರೆಗೆ ಶ್ರೀಮಧ್ವಾಚಾರ್ಯರು ಈ ಕಾಣ್ವತೀರ್ಥಕ್ಕೆ ಮತ್ತೊಮ್ಮೆ ಮಹತ್ವವನ್ನು ಕೊಟ್ಟಿದ್ದಾರೆ. ಅದು ಹೇಗೆಂದರೆ:—

ಆದ್ರಾಂಗಾಃ ಸಪದಿ ನಿಮಜ್ಜನಾತ್ಸರಸ್ಯಾಂ **ಕಣ್ವಸ್ಯ**
**ದ್ವಿಜಋಷಭಸ್ಯ ವಲ್ಲಭಾಯಾಮ್ ।**
ತತ್ರಾಯುಸ್ ಖರಕಿರಣೋಪರಾಗಹೇತೋರ್ಗ್ರಾವೀಣಾ
ಅಪಿ ಸಕಲಾಃ ಸಬಾಲವೃದ್ಧಾಃ ॥
(ಸುಮಧ್ವವಿಜಯ ೧೬-೧೧)

ಅರ್ಥ:—ಶ್ರೀಮಧ್ವಾಚಾರ್ಯರು ಸೂರ್ಯಗ್ರಹಣದ ನಿಮಿತ್ತವಾಗಿ ಆಬಾಲವೃದ್ಧರಿಂದೊಡಗೂಡಿ **ಶ್ರೇಷ್ಠ ಬ್ರಾಹ್ಮಣರಾದ ಕಣ್ವರಿಗೆ ಪ್ರಿಯವಾದ** ಸರೋವರದಲ್ಲಿ ಎಂದರೆ ಕಾಣ್ವತೀರ್ಥದಲ್ಲಿ ಸ್ನಾನಮಾಡಿ ತೊಯಿಸಿಕೊಂಡಂಥ ಶರೀರವುಳ್ಳವರಾಗಿ ಸ್ನಾನಾರ್ಥವಾಗಿ ಸಮುದ್ರವನ್ನು ಕುರಿತು ಪ್ರಾಪ್ತರಾದರು.

"ಆದರಾದ್ದ್ವಿರುಕ್ತಿಃ"ಎಂಬ ನ್ಯಾಯದಂತೆ ಶ್ರೀಮದಾನಂದತೀರ್ಥರ ಹೃದಯದಲ್ಲಿ ಕಾಣ್ವತೀರ್ಥದ ಬಗ್ಗೆ ಅತ್ಯಂತ ಉತ್ಕಟವಾದ ಆದರ ಭಾವವಿದ್ದುದನ್ನು ವ್ಯಕ್ತ ಮಾಡುವುದಕ್ಕಾಗಿ ತತ್ಕಾಲೀನ ಜನರು (ಅತಏವ ಸುಮಧ್ವವಿಜಯಕಾರರು) ಕಾಣ್ವತೀರ್ಥದ ಮಹಿಮೆಯನ್ನು ಈ ಪ್ರಕಾರ ಎರಡು ಸಲ ನಿರೂಪಿಸಿದ್ದಾರೆ.

ಶ್ರೀಮದಾನಂದತೀರ್ಥರು, ತಮ್ಮ ಜನ್ಮಸ್ಥಳವಾದ ಪಾಜಕಕ್ಷೇತ್ರದಲ್ಲಿಯೇ ಪರಶುರಾಮದೇವರಿಂದ ನಿರ್ಮಿತವಾದ ಪರಶುತೀರ್ಥ, ಧನುಸ್ತೀರ್ಥ,ಗದಾತೀರ್ಥ,ಬಾಣತೀರ್ಥಗಳೆಂಬ ಮಹತ್ವವಾದ ನಾಲ್ಕು ತೀರ್ಥಗಳಿದ್ದರೂ ಕೂಡ ಇವುಗಳನ್ನೆಲ್ಲ ಬಿಟ್ಟುಕೊಟ್ಟು,ಬಹುದೂರದಲ್ಲಿರುವ ಎಂದರೆ ಉಡುಪಿಯಿಂದ ೪೫ ಮೈಲು ದೂರದಲ್ಲಿರುವ ಅಥವಾ ಪಾಜಕಕ್ಷೇತ್ರದಿಂದ ೪೦ ಮೈಲು ದೂರದಲ್ಲಿರುವ ಕಾಣ್ವತೀರ್ಥಕ್ಕೇನೇ ತಮ್ಮ ಶಿಷ್ಯರನ್ನೆಲ್ಲ ಕರೆದುಕೊಂಡು ಹೋಗಿ ಅವರಿಗೆ ಸನ್ಯಾಸಾಶ್ರಮವನ್ನು ಕೊಟ್ಟರು. ಅರ್ಥಾತ್ ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರಾದುದ

ರಿಂದಲೇ ತಮ್ಮ ಶಾಖಾಪ್ರವರ್ತಕ ಋಷಿಗಳಾದ ಕಣ್ವಮಹಾಮುನಿಗಳ ಹೆಸರಿನಿಂದ ಸುಪ್ರಸಿದ್ಧವಾದ ಈ ಕಾಣ್ವತೀರ್ಥದ ಬಗ್ಗೆ ಪರಮಪೂಜ್ಯ ಭಾವವನ್ನೂ ಆತ್ಮೀಯ ಭಾವನೆಯನ್ನೂ ಹೀಗೆ ವ್ಯಕ್ತಪಡಿಸಿದ್ದಾರೆ. ಇದೇ ಮಾತನ್ನು ಈ ಮೊದಲೇ ಸುಮಧ್ವವಿಜಯದ ಆಧಾರದಿಂದ ಸ್ಪಷ್ಟ ಮಾಡಿದ್ದೇವೆ.

ಶ್ರೀಮಧ್ವಾಚಾರ್ಯರು ತಮ್ಮ ಅನುಜರನ್ನೂ, ಗೋದಾವರೀ ತೀರದಿಂದ ಬಂದ ಶೋಭನ ಭಟ್ಟರನ್ನೂ ಹಾಗೂ ಉತ್ತರ ಕರ್ನಾಟಕದಿಂದ ಬಂದ ಗೋವಿಂದಶಾಸ್ತ್ರಿಗಳಿಬ್ಬರನ್ನೂ ಶ್ಯಾಮಶಾಸ್ತ್ರಿಗಳನ್ನೂ ಮತ್ತು ೭ ಜನ ಶಿವಳ್ಳಿ ಬ್ರಾಹ್ಮಣರನ್ನೂ ಕರೆದುಕೊಂಡು ಹೋಗಿ, ಕಾಣ್ವತೀರ್ಥ ಮಹಾಕ್ಷೇತ್ರದಲ್ಲಿ ಈ ೧೨ ಜನ ಶಿಷ್ಯರಿಗೆ ಸನ್ಯಾಸಾಶ್ರಮ, ಮಂತ್ರೋಪದೇಶಗಳನ್ನು ಕೊಟ್ಟರು. ಇದಲ್ಲದೆ ತಮ್ಮ ಅನುಜರಿಗೆ **ವಿಷ್ಣುತೀರ್ಥ**ರೆಂದೂ, ಶೋಭನಭಟ್ಟರಿಗೆ **ಪದ್ಮನಾಭತೀರ್ಥ**ರೆಂದೂ, ಗೋವಿಂದ ಶಾಸ್ತ್ರಿಗಳಿಬ್ಬರಿಗೆ **ಮಾಧವತೀರ್ಥ**ರೆಂದೂ, **ಅಕ್ಷೋಭ್ಯತೀರ್ಥ**ರೆಂದೂ, ಶ್ಯಾಮಶಾಸ್ತ್ರಿಗಳಿಗೆ **ನರಹರಿತೀರ್ಥ**ರೆಂದೂ ಮಿಕ್ಕ ೭ ಜನ ಶಿವಳ್ಳಿ ಬ್ರಾಹ್ಮಣರಿಗೆ:-೧ ಹೃಷೀಕೇಶತೀರ್ಥರು, ೨ ಜನಾರ್ಧನತೀರ್ಥರು, ೩ ನರಸಿಂಹತೀರ್ಥರು, ೪ ಉಪೇಂದ್ರತೀರ್ಥರು, ೫ ವಾಮನತೀರ್ಥರು, ೬ ರಾಮತೀರ್ಥರು, ೭ ಅಧೋಕ್ಷಜತೀರ್ಥರು ಎಂದೂ ಆಶ್ರಮ-ನಾಮಗಳನ್ನು ಕೊಟ್ಟರು.

ಉಡುಪಿಯಲ್ಲಿ ತಾವು ಪ್ರತಿಷ್ಠೆ ಮಾಡಿದ ಶ್ರೀಕೃಷ್ಣ ದೇವಾಲಯಕ್ಕೆ ಯಾರಿಂದಲೂ ತೊಂದರೆಯಾಗಬಾರದೆಂದು ಈ ಶ್ರೀಕೃಷ್ಣ ದೇವಾಲಯದ ಸುತ್ತುಮುತ್ತು ಪ್ರತಿಯೊಂದು ದಿಕ್ಕಿಗೆ ಒಂದರಂತೆ ಎಂಟೂ ದಿಕ್ಕುಗಳಲ್ಲಿ ಎಂಟು ಮಠಗಳನ್ನು ಕಟ್ಟಿಸಿ, ಒಂದೊಂದು ಮಠದಲ್ಲಿ ಒಬ್ಬೊಬ್ಬ ಯತಿಯು ಇರುವಂತೆ ಏರ್ಪಾಡು ಮಾಡಿ, ಎರಡು ತಿಂಗಳಿಗೊಂದು [೧]ಪಾಳಿಯಂತೆ

೧ ಶ್ರೀಮಧ್ವಾಚಾರ್ಯರು, ಒಬ್ಬೊಬ್ಬರು ಯತಿವರ್ಯರು ಎರಡೆರಡು ತಿಂಗಳು ಶ್ರೀಕೃಷ್ಣನ ಪೂಜೆಯನ್ನು ಮಾಡಬೇಕೆಂದು ಏರ್ಪಡಿಸಿದ್ದನ್ನು, ಶ್ರೀವಾದಿರಾಜತೀರ್ಥಯತಿರಾಜರು ತೆಗೆದು ಹಾಕಿ, ಒಬ್ಬೊಬ್ಬರು ಎರಡೆರಡು ವರ್ಷ ಶ್ರೀಕೃಷ್ಣಪರ್ಯಾಯ ಪೂಜೆಯನ್ನು ನಡಿಸಬೇಕೆಂದು ಗೊತ್ತು ಮಾಡಿದರು.



ಕಾಣ್ವತೀರ್ಥದ ಬಳಿಯಲ್ಲಿ
ಶ್ರೀಮನ್ಮಧ್ವಾಚಾರ್ಯರು ತಮ್ಮ ಎಲ್ಲ ಶಿಷ್ಯರಿಗೆ
ಸನ್ಯಾಸಾಶ್ರಮವನ್ನು ಕೊಟ್ಟ ಕಟ್ಟೆಯು



ಕಾಣ್ವತೀರ್ಥ

ಪ್ರತಿಯೊಬ್ಬ ಯತಿಯು ಶ್ರೀಕೃಷ್ಣ ಪೂಜೆಯನ್ನು ಮಾಡುತ್ತ ಈ ಎಂಟು ಜನ ಯತಿಗಳೂ ಮೂರ್ತಿಭಂಜಕರ ಹಾವಳಿಯಿಂದಲೂ ಅನ್ಯ ಮತಾನುಯಾಯಿಗಳ ಹಾವಳಿಯಿಂದಲೂ ಈ ಶ್ರೀಕೃಷ್ಣ ದೇವಾಲಯವನ್ನೂ ಮೂರ್ತಿಯನ್ನೂ ಸಂರಕ್ಷಿಸುತ್ತಿರಬೇಕೆಂದು ಶ್ರೀಮದಾಚಾರ್ಯರು ಕಟ್ಟಪ್ಪಣೆಯನ್ನು ಮಾಡಿದರು. ಆದುದರಿಂದಲೇ ಆಚಾರ್ಯರು ಎಂಟು ಮಠಗಳನ್ನು ಕಟ್ಟಿ, ಎಂಟು ಜನ ಯತಿಗಳನ್ನು ಅರ್ಚಕರನ್ನಾಗಿ ನಿಯಮಿಸಿರುವ ಉದ್ದೇಶವು, ಪ್ರತಿಯೊಂದು ದಿಕ್ಕಿಗೆ ಒಬ್ಬೊಬ್ಬರು ಯತಿವರ್ಯರು ಈ ಶ್ರೀಕೃಷ್ಣ ದೇವಾಲಯದ ಸಂರಕ್ಷಣಾರ್ಥವಾಗಿ ಸದಾಸರ್ವದಾ ಇರಬೇಕೆಂಬುದೇ ಆಗಿದೆ.

ಶ್ರೀಮದಾಚಾರ್ಯರು ೮ ಜನ ಯತಿಗಳನ್ನು ಶ್ರೀಕೃಷ್ಣದೇವರ ಅರ್ಚಕರನ್ನಾಗಿ ನಿಯಮಿಸಿ, ತಮ್ಮ ಅನುಜರಾದ ವಿಷ್ಣುತೀರ್ಥರನ್ನು ಈ ಎಂಟೂ ಮಠಗಳ ಮೇಲೆ ಮೇಲ್ವಿಚಾರಣೆಯನ್ನು ಮಾಡುವ ವರಿಷ್ಠ ಅಧಿಕಾರಿಗಳನ್ನಾಗಿ ನಿಯಮಿಸಿದರು. ಇಷ್ಟೇ ಅಲ್ಲ ಇವುಗಳಲ್ಲಿ ಒಂದು ಮಠವನ್ನೂ ಸಹ ಇವರ ಸ್ವಾಧೀನಕ್ಕೆ ಕೊಟ್ಟರು ಇದೂ ಅಲ್ಲದೆ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಈ ವಿಷ್ಣುತೀರ್ಥರಿಗೆ ಸ್ವತಂತ್ರವಾದ ಮಠವನ್ನು ನಿರ್ಮಿಸಿ ಕೊಟ್ಟು, ಇವರ ಗೌರವಕ್ಕೆ ಶೋಭಿಸುವಂತೆ ತಕ್ಕ ಏರ್ಪಾಡನ್ನು ಮಾಡಿದರು.

ಶ್ರೀಮಧ್ವಾಚಾರ್ಯರು ಕೊನೆಯಸಾರೆ ಬದರಿಕಾಶ್ರಮಕ್ಕೆ ಹೋಗುವಾಗ್ಗೆ ಪಾಜಕ ಕ್ಷೇತ್ರದಲ್ಲಿರುವ ತಮ್ಮ ಮನೆಯನ್ನು ತಮ್ಮ ಅನುಜರಾದ ವಿಷ್ಣುತೀರ್ಥರ ವಶಕ್ಕೆ ಕೊಡುವದು ಸ್ವಾಭಾವಿಕವಾಗಿದೆ. ಕಿಂಬಹುನಾ ಕ್ರಮಪ್ರಾಪ್ತವಾಗಿದೆ. ಇನ್ನು "ಶ್ರೀಮದಾಚಾರ್ಯರು ತಮ್ಮ ಮನೆಯನ್ನು ಕಾಣೂರು ಮಠದ ವಶಕ್ಕೆ ಕೊಟ್ಟು, ಬದರಿಕಾಶ್ರಮಕ್ಕೆಹೋದರು." ಎಂಬ ಆಖ್ಯಾಯಿಕೆಯು ಉಡುಪಿ ಪ್ರಾಂತದಲ್ಲಿ ಲೋಕವಿಖ್ಯಾತವಾಗಿಯೇ ಇದೆ. ಇದಕ್ಕೆ ತಕ್ಕಂತೆ ಈಗಲೂ ಪಾಜಕಕ್ಷೇತ್ರದಲ್ಲಿ ಶ್ರೀಮದಾಚಾರ್ಯರ ಮನೆಯಲ್ಲಿ ಕಾಣೂರು ಮಠದವರೇ ಇದ್ದಾರೆ. ಆತಏವ ಕಾಣೂರು ಮಠವೇ ವಿಷ್ಣುತೀರ್ಥರ ಮಠವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಶ್ರೀಮದಾಚಾರ್ಯರು ಅದೃಶ್ಯರಾದ ಬಳಿಕ ಮುಂದೆ ಮೂರು

ನೂರು ವರ್ಷಗಳ ಮೇಲೆ ಎಂದರೆ ೧೬ನೆಯ ಶತಮಾನದಲ್ಲಿ ಸೋದೇ ಮಠದಲ್ಲಿ ಶ್ರೀವಾದಿರಾಜ ತೀರ್ಥಯತಿರಾಜರು ಪ್ರಬಲರಾಗಿ ವಿಖ್ಯಾತರಾದುದರಿಂದ ಸೋದೇಮಠವೇ ಶ್ರೇಷ್ಠವೆಂಬ ಭಾವನೆಯು ಉದಯವಾಗಿ ಶ್ರೇಷ್ಠವಾದ ಈ ಸೋದೇ ಮಠಕ್ಕೇನೇ ಆಚಾರ್ಯರ ಅನುಜರಾದ ವಿಷ್ಣುತೀರ್ಥರು ಪಟ್ಟಕ್ಕೆ ಕುಳಿತಿರಬೇಕೆಂದು ತಪ್ಪುತಿಳಿವಳಿಕೆಯುಂಟಾಗಿದೆ. ವಸ್ತುತಃ ಕಾಣೂರು ಮಠಕ್ಕೆನೇ ವಿಷ್ಣುತೀರ್ಥರು ಪಟ್ಟಕ್ಕೆ ಕುಳಿತಿದ್ದರೆಂಬುದು ಮೇಲಿನ ವಿವೇಚನೆಯಿಂದ ಚೆನ್ನಾಗಿ ವ್ಯಕ್ತವಾಗಿಯೇ ಇದೆ. ಇದೂ ಅಲ್ಲದೆ ವಿಷ್ಣುತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರಾದುದರಿಂದ ಈ ಮಠಕ್ಕೆ **'ಕಾಣ್ವರ ಮಠ'** ಎಂಬ ನಾಮಧೇಯವು ಪ್ರಾಪ್ತವಾಯಿತು. ಇಷ್ಟೇ ಅಲ್ಲ ಈ ಮಠದ ಬನಾಮ ಗ್ರಾಮವಾದ ಊರಿಗೆ ಕಾಣ್ವತೀರ್ಥದಂತೆ "ಕಾಣ್ವರ+ಊರು=ಕಾಣ್ವೂರು" ಎಂಬ ಹೆಸರು ಉಂಟಾಯಿತು. ಮುಂದೆ ಕಾಲಾಂತರದಿಂದ ಜನರು ಉಚ್ಚಾರ ಸೌಕರ್ಯಕ್ಕಾಗಿ ಈ ಮಠವನ್ನೂ ಈ ಊರನ್ನೂ 'ಕಾಣೂರ ಮಠ' ಎಂದೂ 'ಕಾಣೂರು' ಎಂದೂ ಸಂಬೋಧಿಸಲಾರಂಭಿಸಿದರು.[೧] ಇರಲಿ. ಇನ್ನೂ ಒಂದು ಮಹತ್ವದ ಸಂಗತಿಯೇನೆಂದರೆ ಕಾಣ್ವಶಾಖೆಯ ಮಾಧ್ವರಲ್ಲಿ ಈಗ ಕಾಣೂರು ಮಠವೆಂದು ಕರೆಯಲ್ಪಡುವ ಈ ಮಠವು ತಮ್ಮ ಕಾಣ್ವಶಾಖೆಯ ಬ್ರಾಹ್ಮಣರ ಮಠವೆಂಬ ಪ್ರತೀತಿಯು ಪರಂಪರಾಗತವಾಗಿ ನೆಲೆಗೊಂಡಿದೆ. ಇತ್ಯರ್ಥವೇನೆಂದರೆ, ಕಾಣ್ವಶಾಖೆಯ ಬ್ರಾಹ್ಮಣರಾದ ವಿಷ್ಣುತೀರ್ಥರು ಕಾಣೂರು ಮಠಕ್ಕೆ (ಎಂದರೆ ಕಾಣ್ವರ ಮಠಕ್ಕೆ) ಮೂಲ ಗುರುಗಳಾಗಿದ್ದರೆಂಬುದು ಸಿದ್ಧ. ಈ ಕಾಣ್ವರ ಮಠವನ್ನು ಇತ್ತೀಚೆಗೆ ಶಿವಳ್ಳಿ ಬ್ರಾಹ್ಮಣರು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಏಕೆಂದರೆ ಇವರು ಈ ತೌಳವದೇಶದಲ್ಲಿ ಬಹು ಸಂಖ್ಯಾಕರಾಗಿದ್ದಾರೆ. ಇಷ್ಟಕ್ಕೂ ಮಿಕ್ಕ ೭ ಮಠಗಳನ್ನು ಆಚಾರ್ಯರೇ ಈ ಶಿವಳ್ಳಿ ಬ್ರಾಹ್ಮಣರ ಕೈಯಲ್ಲಿ ಕೊಟ್ಟು, ಇವರೆಲ್ಲರನ್ನು ಶ್ರೀಕೃಷ್ಣದೇವರ ಅರ್ಚಕರನ್ನಾಗಿ ನಿಯಮಿಸಿದ್ದರಿಂದ ವಿಷ್ಣುತೀರ್ಥರು ನಿರ್ಯಾಣಹೊಂದಿದ ಬಳಿಕ ಬಹು ಸಂಖ್ಯಾಕರಾದ ಈ ಶಿವಳ್ಳಿ ಬ್ರಾಹ್ಮಣರು ಪ್ರಬಲರಾಗಿ, ಈ ವಿಷ್ಣುತೀರ್ಥರ

---

೧ 'ಕಾಣೂರ ಮಠ' ಎಂಬುದು 'ಕಾಣ್ವರ ಮಠ' ಎಂಬುದರ ಅಪಭ್ರಂಶವಾಗಿದೆ. ಹಾಗೂ 'ಕಾಣೂರು' ಎಂಬುದು 'ಕಾಣ್ವೂರು' ಎಂಬುದರ ಅಪಭ್ರಂಶವಾಗಿದೆ.

ಎರಡೂ ಮಠಗಳನ್ನು ಎಂದರೆ ಕಾಣೂರು ಮಠವನ್ನೂ ಸುಬ್ರಹ್ಮಣ್ಯ ಮಠವನ್ನೂ ಆಕ್ರಮಿಸುವುದು ಅವರಿಗೆ ಸುಲಭ ಸಾಧ್ಯವಾಯಿತು. ಇರಲಿ.

ಇನ್ನು ಶ್ರೀಮಧ್ವಾಚಾರ್ಯರು ತಮ್ಮ ಈ ಹನ್ನೆರಡು ಜನ ಶಿಷ್ಯರಿಗೆ ಕಾಣ್ವತೀರ್ಥದಲ್ಲಿ ಸನ್ಯಾಸಾಶ್ರಮವನ್ನು ಕೊಟ್ಟು, ಮುಂದೆ ಇವರೆಲ್ಲರಿಗೆ ಏನೇನು ಸೌಕರ್ಯಗಳನ್ನು ಏರ್ಪಡಿಸಿ ಕೊಟ್ಟರೆಂಬುದನ್ನು ನೋಡುವಾ.

## ಉಡುಪಿಯ ಅಷ್ಟ ಮಠಗಳ ಶ್ರೀಪಾದಂಗಳವರು

| ಮಠಗಳು | ಶ್ರೀಮಧ್ವದತ್ತ ಪ್ರತಿಮಾ | ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು | ದ್ವಂದ್ವ ಮಠಗಳು |
|---|---|---|---|
| ಕಾಣೂರ ಮಠ | ಶ್ರೀನೃಸಿಂಹ | ವಿಷ್ಣು ತೀರ್ಥರು | ದ್ವಂದ್ವ |
| ಪೇಜಾವರ ಮಠ | ಶ್ರೀವಿಟ್ಠಲ | ಅಧೋಕ್ಷಜ ತೀರ್ಥರು | |
| ಶಿರೂರು ಮಠ | ಶ್ರೀವಿಟ್ಠಲ | ವಾಮನ ತೀರ್ಥರು | ದ್ವಂದ್ವ |
| ಸೋದೇ ಮಠ | ಶ್ರೀಭೂವರಾಹ | ರಾಮತೀರ್ಥರು | |
| ಫಲಿಮಾರು ಮಠ | ಶ್ರೀರಾಮ | ಹೃಷೀಕೇಶತೀರ್ಥರು | ದ್ವಂದ್ವ |
| ಅದಮಾರು ಮಠ | ಕಾಲೀಯಮರ್ದನಕೃಷ್ಣ | ನರಸಿಂಹತೀರ್ಥರು | |
| ಕೃಷ್ಣಾಪುರ ಮಠ | ಕಾಲೀಯಮರ್ದನಕೃಷ್ಣ | ಜನಾರ್ದನತೀರ್ಥರು | ದ್ವಂದ್ವ |
| ಪುತ್ತಿಗೇ ಮಠ | ಶ್ರೀವಿಟ್ಠಲ | ಉಪೇಂದ್ರತೀರ್ಥರು | |

[೧]ಕಾಣ್ವತೀರ್ಥದ ಬಳಿಯಲ್ಲಿ ಈ ಅಷ್ಟಶ್ರೀಪಾದಂಗಳವರಿಗೆ ಸನ್ಯಾಸಾಶ್ರಮವನ್ನು ಕೊಟ್ಟ ಸ್ಥಾನವಾದ ನಾಲ್ಕು ಬಾಗಿಲುಗಳುಳ್ಳ ಅಶ್ವತ್ಥ ಕಟ್ಟೆಯು ಇದೆ. ಇದರ ಈ ನಾಲ್ಕು ಬಾಗಿಲುಗಳಲ್ಲಿ ಒಂದೊಂದು ಬಾಗಿಲದಿಂದ ಇಬ್ಬಿಬ್ಬರು • ಶಿಷ್ಯರನ್ನು ಆಚಾರ್ಯರು ಹೊರಗೆ ದಾಟಿಸಿ, ಆಗ ಒಂದೊಂದು ಬಾಗಿಲಿನಿಂದ ಕೂಡಿಕೊಂಡು ಹೊರಗೆ ಬಂದ ಇಬ್ಬಿಬ್ಬರು

೧ ಈ ಪ್ರಕಾರ ಆಚಾರ್ಯರು ತಾವು ಬದರಿಕಾಶ್ರಮವನ್ನು ಕುರಿತು ಹೋಗುವ ಅಪೇಕ್ಷಾವಂತರಾಗಿ ಶ್ರೀಕೃಷ್ಣದೇವರ ಪೂಜಾ (ಮತ್ತು) ಸ್ವಮಠ ಸ್ಥಾಪನಾರ್ಥವಾಗಿ, ತಮ್ಮ ಅನುಜರಾದ ವಿಷ್ಣುತೀರ್ಥಾಚಾರ್ಯರ ಸಹವಾಗಿ ಅಷ್ಟಬ್ರಹ್ಮಚಾರಿಗಳು, ಗೋದಾತೀರಸ್ಥರಾದ ವಿವಿಧ ಸಾಂಸಾರಿಕದುಃಖದರ್ಶನೇನ ವಿರಕ್ತರಾದ... ಶೋಭನಭಟ್ಟರಿಗೆ ಸಹ ೧೧೮೦ ನೇ ಪಿಂಗಳ ಸಂವತ್ಸರದ ವೈಶಾಖ ಶು. ೭ ಲ್ಲು **ಕಣ್ವತೀರ್ಥ ಮಹಾಕ್ಷೇತ್ರದಲ್ಲಿ** ಅಶ್ರಮ **ಮಂತ್ರೋಪದೇಶ**ಗಳನ್ನು ಕೊಟ್ಟರು.

(ಶ್ರೀಮಾನ್ ಬೆನಗಲ್ ರಾಮರಾವ ಎಂ. ಎ ಎಲ್ ಎಲ್. ಬಿ. ಇವರು "ಪ್ರಾಚೀನ ಕರ್ನಾಟಕ" ಪತ್ರಿಕೆಯಲ್ಲಿ ಪ್ರಸಿದ್ಧ ಮಾಡಿದ "ಅದಮಾರು ಮಠದ ಕೈಫಿಯತ್ತು")

ಶಿಷ್ಯರು ದ್ವಂದ್ವ ಮಠದವರೆಂದು ನಿಯಮ ಮಾಡಿದರು. ಈ ನಿಯಮಕ್ಕನುಸರಿಸಿ ನಿರ್ಮಿಸಲ್ಪಟ್ಟ ದ್ವಂದ್ವ ಮಠಗಳನ್ನು ಮೇಲಿನ ಕೋಷ್ಟಕದಲ್ಲಿ ಸ್ಪಷ್ಟ ಮಾಡಿ ತೋರಿಸಿದ್ದೇವೆ. ಹಾಗೂ ಈ ಎಂಟು ಜನ ಬಾಲಯತಿಗಳಿಗೆ ಶ್ರೀಮದಾಚಾರ್ಯರು ಕೊಟ್ಟ ಶ್ರೀನರಸಿಂಹ, ಶ್ರೀವಿಟ್ಠಲ, ಶ್ರೀಭೂವರಾಹ, ಶ್ರೀರಾಮ, ಕಾಲಿಯಮರ್ದನ ಶ್ರೀಕೃಷ್ಣ ಮುಂತಾದ ದೇವರ ಪ್ರತಿಮೆಗಳಲ್ಲಿ ಯಾವ ಯಾವ ಪ್ರತಿಮೆಯು ಯಾವ ಯಾವ ಮಠದಲ್ಲಿರುತ್ತದೆಂಬುದನ್ನೂ ವಿಶದವಾಗಿ ಕಾಣಿಸಿದ್ದೇವೆ.

ಈ ಕಾಣ್ವತೀರ್ಥವು, ಕಾಣ್ವರ ಮಠದ ಎಂದರೆ ಕಾಣೂರ ಮಠದ ಶ್ರೀಪಾದಂಗಳವರ (ಅರ್ಥಾತ್ ವಿಷ್ಣುತೀರ್ಥರ) ಅಧಿಕಾರದಲ್ಲಿರುವುದು ಅಪರಿಹಾರ್ಯವಾಗಿದೆ. ಈ ಕಾಣ್ವತೀರ್ಥವು ಕಾಣೂರ ಮಠದ ಅಧಿಕಾರದಲ್ಲಿದ್ದ ಮೇಲೆ ಈ ತೀರ್ಥವು ಪೇಜಾವರ ಮಠದ ಅಧಿಕಾರದಲ್ಲಿಯೂ ಇರುವುದು ಕ್ರಮಪ್ರಾಪ್ತವಾಗಿದೆ. ಏಕೆಂದರೆ ಕಾಣೂರ ಮಠವೂ ಪೇಜಾವರ ಮಠವೂ ದ್ವಂದ್ವ ಮಠಗಳಾಗಿರುತ್ತವೆ. ಆದುದರಿಂದಲೇ ಈಗ ಈ ಕಾಣ್ವತೀರ್ಥವು, ಪೇಜಾವರ ಮಠದ ಶ್ರೀಪಾದಂಗಳವರ ಅಧಿಕಾರದಲ್ಲಿದೆ. ಈ ಪೇಜಾವರಮಠದ ಜಗದ್ವಿಖ್ಯಾತರಾದ ಶ್ರೀಮದ್ವಿಜಯಧ್ವಜ ತೀರ್ಥಾಚಾರ್ಯರು ಈ ಕ್ಷೇತ್ರದಲ್ಲಿ ಕಾಣ್ವತೀರ್ಥದ ದಂಡೆಯ ಮೇಲೆ ಮಠವನ್ನು ಕಟ್ಟಿಸಿ ಶ್ರೀ ಮುಖ್ಯಪ್ರಾಣನನ್ನು ಪ್ರತಿಷ್ಠೆ ಮಾಡಿದ್ದಾರೆ. ಈ ಶ್ರೀವಿಜಯಧ್ವಜಾಚಾರ್ಯರು ಇಲ್ಲಿಯೇ ಕುಳಿತುಕೊಂಡು ಭಾಗವತಕ್ಕೆ ವ್ಯಾಖ್ಯಾನ ಮಾಡಿದ್ದಾರೆಂದು ಐತಿಹ್ಯವಿರುತ್ತದೆ. ಈಗಲೂ ಈ ಕಾಣ್ವತೀರ್ಥವು ಪುಣ್ಯಕ್ಷೇತ್ರವೆಂದು ಸುಪ್ರಸಿದ್ಧವಾಗಿದೆ. ಆದ್ದರಿಂದ ಈ ದಕ್ಷಿಣ ಕನ್ನಡ ಜಿಲ್ಹೆಯಲ್ಲಿರುವ ಬ್ರಾಹ್ಮಣರು ಈ ಕಾಣ್ವತೀರ್ಥಕ್ಕೆ ಬಂದು, ಮದುವೆ, ಉಪನಯನ ಮುಂತಾದ ಶುಭಕಾರ್ಯಗಳನ್ನು ಮಾಡಿಕೊಂಡು ಹೋಗುತ್ತಿದ್ದಾರೆ. ಇರಲಿ.

ಸಾರಾಂಶ, ಪರಮಪವಿತ್ರವಾದ ಈ ಕಾಣ್ವತೀರ್ಥ ಮಹಾಕ್ಷೇತ್ರದಲ್ಲಿ ಶ್ರೀಮನ್ಮಧ್ವಾಚಾರ್ಯರು ೧೨ ಜನ ಶಿಷ್ಯರಿಗೆ ಸನ್ಯಾಸಾಶ್ರಮವನ್ನು ಕೊಟ್ಟು, ಆ ಶಿಷ್ಯರಲ್ಲಿ ೭ ಜನ ಶಿವಳ್ಳಿ ಬ್ರಾಹ್ಮಣ ಬಾಲಯತಿಗಳನ್ನು ಶ್ರೀ ಕೃಷ್ಣದೇವರ ಅರ್ಚಕರನ್ನಾಗಿ ನಿಯಮಿಸಿದರು. ಮತ್ತು ತಮ್ಮ ಅನುಜ

ರಾದ ವಿಷ್ಣುತೀರ್ಥರನ್ನು ಈ ಎಲ್ಲ ಅರ್ಚಕರ ಮೇಲೆ ಮೇಲ್ವಿಚಾರಣೆಯನ್ನು ಮಾಡುವ [1]ವರಿಷ್ಠ ಅಧಿಕಾರಿಗಳನ್ನಾಗಿ ನಿಯಮಿಸಿ, ಇವರಿಗೋಸ್ಕರ ಉಡುಪಿಯಲ್ಲಿ ಒಂದು ಮಠವನ್ನೂ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಮತ್ತೊಂದು ಸ್ವತಂತ್ರವಾದ ಮಠವನ್ನೂ ಏರ್ಪಡಿಸಿಕೊಟ್ಟರು. ಇನ್ನು, ಘಟ್ಟದ ಮೇಲಿನ ಕರ್ನಾಟಕ ದೇಶದ ಪದ್ಮನಾಭತೀರ್ಥ ಪ್ರಭೃತಿ ನಾಲ್ಕು ಜನ ಶಿಷ್ಯರಿಗೆ ಜಗದ್ಗುರು ಅಧಿಕಾರವನ್ನು ಹೇಗೆ ಕೊಟ್ಟರೆಂಬುದನ್ನು ಮುಂದಿನ ಅಧ್ಯಾಯದಲ್ಲಿ ಸವಿಸ್ತರವಾಗಿ ವಿವೇಚಿಸುತ್ತೇವೆ.

---

೧ ವಿಷ್ಣುತೀರ್ಥರು ಮಧ್ವಶಿಷ್ಯರಲ್ಲಿ ಅಗ್ರಗಣ್ಯರು, ಅರ್ಥಾತ್ ಮೊದಲನೆಯವರು. (ಸುಮಧ್ವವಿಜಯ ೧೫-೧೦೨) ಈ ವಿಷ್ಣುತೀರ್ಥರ ಶಿಷ್ಯರು ಅನಿರುದ್ಧತೀರ್ಥರು, ವ್ಯಾಸತೀರ್ಥರು, ಎಂಬುವರಿಬ್ಬರಿದ್ದರು. ಇವರಲ್ಲಿ ಅನಿರುದ್ಧತೀರ್ಥರನ್ನು ಉಡುಪಿಯಲ್ಲಿರುವ ತಮ್ಮ ಕಾಣ್ವರ (ಕಾಣೂರ) ಮಠದ ಕಾರ್ಯಕಲಾಪಗಳನ್ನು ನೆರವೇರಿಸುವುದಕ್ಕೂ ಹಾಗೂ ವ್ಯಾಸತೀರ್ಥರನ್ನು ಸುಬ್ರಹ್ಮಣ್ಯಕ್ಷೇತ್ರದಲ್ಲಿರುವ ಮಠದ ಕಾರ್ಯಕಲಾಪಗಳನ್ನು ಜರುಗಿಸುವುದಕ್ಕೂ ನಿಯಮಿಸಿ, ವಿಷ್ಣುತೀರ್ಥರು ಎಲ್ಲ ಮಠಗಳ ಮೇಲ್ವಿಚಾರಣೆಯನ್ನು ಮಾಡುತ್ತ ತಪಸ್ಸನ್ನು ಮಾಡಿದರು.

# ೧೩ನೆಯ ಅಧ್ಯಾಯ

## ಶ್ರೀಮಧ್ವಾಚಾರ್ಯರ ಕೊನೆಯ ಬದರಿಕಾಶ್ರಮ ಯಾತ್ರೆಯು

ಮತ್ತು

ಶ್ರೀವಿಷ್ಣುತೀರ್ಥರ ತಪಶ್ಚರ್ಯೆಯು

ಹಾಗೂ

## ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರ ಚರಿತ್ರೆಗಳು

ಶ್ರೀಮಧ್ವಾಚಾರ್ಯರು ಮಾಡಿದ ಪ್ರತಿಯೊಂದು ಕಾರ್ಯದಲ್ಲಿ ಔಚಿತ್ಯವಿದೆ. ಈ ಶ್ರೀಮದಾಚಾರ್ಯರು ಸ್ವತಃ ತಾವು ಘಟ್ಟದ ಮೇಲಿನ ಕರ್ನಾಟಕ ದೇಶದವರು. ಆದುದರಿಂದಲೇ ಈ ಆಚಾರ್ಯರು ಆತ್ಮೀಯ ಭಾವನೆಯಿಂದ ಘಟ್ಟದ ಮೇಲಿನ ಕರ್ನಾಟಕ ದೇಶದ ನಿವಾಸಿಗಳಾದ ಪದ್ಮನಾಭತೀರ್ಥ ಪ್ರಭೃತಿ ನಾಲ್ಕು ಜನ ಶಿಷ್ಯರಿಗೆ ಜಗದ್ಗುರು ಅಧಿಕಾರವನ್ನು ಕೊಟ್ಟರು. ಹಾಗೂ ತುಳುನಾಡಿನಲ್ಲಿ ವಾಸವಾಗಿರುವ ಬ್ರಾಹ್ಮಣರಲ್ಲಿ ಬಹು ಸಂಖ್ಯಾಕರಾದ ಶಿವಳ್ಳಿಬ್ರಾಹ್ಮಣರನ್ನು, ಆ ತೌಳವದೇಶದಲ್ಲಿ (ಎಂದರೆ ಉಡುಪಿಯಲ್ಲಿ) ಪ್ರತಿಷ್ಠೆಮಾಡಿದ ಶ್ರೀಕೃಷ್ಣದೇವರ ಅರ್ಚಕರನ್ನಾಗಿ ನಿಯಮಿಸಿದರು.

ಶ್ರೀಮಧ್ವಾಚಾರ್ಯರ ಪಟ್ಟಶಿಷ್ಯರಾದ ಪದ್ಮನಾಭತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರು, ನರಹರಿತೀರ್ಥರು ಈ ನಾಲ್ಕು ಜನ ಶಿಷ್ಯರೂ ಉತ್ತರ ಕರ್ನಾಟಕದವರು. ಅವರಲ್ಲಿಯೂ ಮೊಟ್ಟಮೊದಲು ಜಗದ್ಗುರು ಪೀಠವನ್ನು ಆರೋಹಣ ಮಾಡಿದ ಶ್ರೀಪದ್ಮನಾಭತೀರ್ಥರಂತೂ (ಎಂದರೆ ಶೋಭನಭಟ್ಟರು) ಕರ್ನಾಟಕದ ತೀರ ಉತ್ತರ[1]ಮೇರೆಯಲ್ಲಿ (ಎಂದರೆ ಗೋದಾವರೀ ನದಿಯ ತೀರದಲ್ಲಿ) ಇದ್ದವರು. ಆದುದರಿಂದ

---

೧ ಶ್ರೀಮಧ್ವಾಚಾರ್ಯರ ಕಾಲದಲ್ಲಿ (ಕ್ರಿ. ಶ. ೧೧೯೯–೧೨೭೮) ಕನ್ನಡ ಭಾಷೆಯ ಪ್ರಚಾರವು ಗೋದಾವರೀ ನದಿಯ ತೀರದ ವರೆಗೆ ಇದ್ದಿತು.

ಶ್ರೀಮದಾನಂದತೀರ್ಥರು ಸ್ಥಾಪಿಸಿದ ದ್ವೈತಮತದ ಜಗದ್ಗುರು ಮಠಕ್ಕೆ "**ಉತ್ತರಾದಿ ಮಠ**" ಎಂಬ ಹೆಸರು ಪ್ರಾಪ್ತವಾಯಿತು.

ಪ್ರಾಚೀನ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಬಾದಾಮಿಯ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಕದಂಬರು, ದೇವಗಿರಿಯ ಯಾದವರು, ಹೊಯ್ಸಳ ಯಾದವರು, ಸವದತ್ತಿಯ ರಟ್ಟರು, ಸೇಂದ್ರಕರು, ಕಲಚೂರ್ಯರು ಪ್ರಭೃತಿ ಅನೇಕ ಅರಸುಮನೆತನಗಳು ರಾಜ್ಯವನ್ನಾಳಿದವು. ಇದಲ್ಲದೆ ಚಾಳುಕ್ಯರು ತೆಲುಗು, ತಮಿಳು ದೇಶಗಳನ್ನು ಕಿಂಬಹುನಾ ದಕ್ಷಿಣ ಹಿಂದುಸ್ಥಾನವನ್ನು ಇಷ್ಟು ಮಾತ್ರವೇ ಅಲ್ಲ, ಅಖಿಲ ಭರತಖಂಡವನ್ನು ಸಹ ಸಾರ್ವಭೌಮರಾಜರಾಗಿ ಆಳಿದ್ದಾರೆ. ಅತಏವ ಉತ್ತರ ಕರ್ನಾಟಕದ ಬ್ರಾಹ್ಮಣರು ರಾಜಕಾರಣದಲ್ಲಿ ಆ ಕಾಲಕ್ಕೆ ಅತ್ಯಂತ ನಿಷ್ಣಾತರಾಗಿದ್ದರು. ಅದಕ್ಕೋಸ್ಕರವಾಗಿಯೇ ತೆಲುಗು ದೇಶದ ಗಜಪತಿ ರಾಜರು ಕರ್ನಾಟಕದಿಂದ ನರಹರಿತೀರ್ಥರ ಪೂರ್ವಜರನ್ನು ಕರೆಸಿಕೊಂಡು ಅವರಿಗೆ ವಂಶಪರಂಪರವಾಗಿ ಅಮಾತ್ಯ ಸ್ಥಾನವನ್ನು ಕೊಟ್ಟಿದ್ದರು. ಈ ಪ್ರಕಾರ ನರಹರಿತೀರ್ಥರು ವಂಶಪರಂಪರೆಯಿಂದ ರಾಜಾಮಾತ್ಯಸ್ಥಾನವನ್ನು ಪಡೆದ ಮನೆತನಕ್ಕೆ ಸೇರಿದವರು. ಅತಏವ ಶ್ರೀಮದಾನಂದತೀರ್ಥರು ಈ ಗಜಪತಿರಾಜರ ಕೋಶದಲ್ಲಿ ಮೂಲ ರಾಮ ಸೀತಾ ಪ್ರತಿಮೆಗಳು ಇರುವುದನ್ನು ತಮ್ಮ ಶಿಷ್ಯರಾದ ಈ ನರಹರಿತೀರ್ಥರ ಮುಖದಿಂದ ತಿಳಿದುಕೊಂಡು ಅವುಗಳನ್ನು ತರುವುದಕ್ಕೆ ಈ ಶಿಷ್ಯರನ್ನೇ ಅಲ್ಲಿಗೆ ಕಳುಹಿಸಿ ಕೊಟ್ಟರು. ಆಗ ಈ ನರಹರಿತೀರ್ಥರು ೧೧೭೯ ನೆಯ ಶಕ ವರ್ಷದ ಪಿಂಗಳ ಸಂವತ್ಸರದ ಆರಂಭದಲ್ಲಿ ಆ ಗಂಜಾಮ ದೇಶಕ್ಕೆ ಹೋಗಿ, ತಮ್ಮ ಪೂರ್ವಾಶ್ರಮದ ಮನೆತನಕ್ಕೆ ವಂಶಪರಂಪರಾಗತವಾಗಿ ಬಂದ ಆ ಗಜಪತಿರಾಜರ ಅಮಾತ್ಯಸ್ಥಾನವನ್ನು ಅಯಾಚಿತವಾಗಿ ಸ್ವೀಕರಿಸಿ, ನಾಲ್ಕೈದು ತಿಂಗಳು ರಾಜ್ಯಕಾರಭಾರವನ್ನು ಮಾಡಿ, ಅಲ್ಲಿರುವ ಮೂಲ ರಾಮ, ಸೀತಾ ಪ್ರತಿಮೆಗಳನ್ನು ಆ ರಾಜರಿಂದ ಇಸಕೊಂಡು—ಬಂದು, ಆಶ್ವಿನ ಶುದ್ಧ ಪಂಚಮಿಯ ದಿವಸ ಶ್ರೀಮದಾಚಾರ್ಯರಲ್ಲಿ ಸಮರ್ಪಿಸಿದರು. ಅಂದಿನಿಂದ ಆಚಾರ್ಯರು ಮೂರು ತಿಂಗಳು ಹದಿನಾರು ದಿವಸ ಅವುಗಳನ್ನು ತಮ್ಮ ಪೆಟ್ಟಿಗೆಯಲ್ಲಿಟ್ಟು ಪೂಜಿಸಿ, ಆ ಬಳಿಕ ಪುಷ್ಯ ಬಹುಳ ಸಪ್ತಮಿಯ ದಿವಸ ಕರಕಮಲಸಂಜಾತ

ಯತಿ ಶಿಷ್ಯರಾದ ಪದ್ಮನಾಭತೀರ್ಥರ ಕೈಯಲ್ಲಿ ಆ ಮೂಲ ರಾಮ, ಸೀತಾ ಪ್ರತಿಮೆಗಳನ್ನು ಸಮರ್ಪಿಸಿದರು. ಅರ್ಥಾತ್ ಈ ಪದ್ಮನಾಭತೀರ್ಥರನ್ನು ಜಗದ್ಗುರು ಪೀಠದ ಮೇಲೆ ಕುಳ್ಳಿರಿಸಿದರು. ತದನಂತರ ಇದೇ ೧೧೭೫ನೆಯ ಶಕ ವರ್ಷದ ಪಿಂಗಳನಾಮ ಸಂವತ್ಸರದ ಮಾಘ ಶುದ್ಧ ನವಮಿ ಮಂಗಳ ವಾರ ದಿವಸ ಶ್ರೀಮದಾನಂದತೀರ್ಥರು ಅದೃಶ್ಯರಾದರು. ಎಂದರೆ ಈ ಸಾರೆ ಬದರಿಕಾಶ್ರಮಕ್ಕೆ ಹೋದವರು ತಿರುಗಿ ಬರಲಿಲ್ಲವೆಂದು ಇತ್ಯರ್ಥ. "ಬದರಿ ಕಾಶ್ರಮದಲ್ಲಿ ಶ್ರೀಮದಾನಂದತೀರ್ಥರು ಶ್ರೀಮದ್ಬಾದರಾಯಣರ ಸನ್ನಿಧಿ ಯಲ್ಲಿ ಶಿಷ್ಯರಾಗಿದ್ದುಕೊಂಡು ಶಾಸ್ತ್ರಾರ್ಥದಲ್ಲಿ ಮಗ್ನರಾಗಿ, ಶ್ರೀಮನ್ನಾ ರಾಯಣನ ಅನಂತ ಕಲ್ಯಾಣಗುಣಾಮೃತವನ್ನು ಪಾನ ಮಾಡಿಕೊಂಡು ಈಗಲೂ ಇರುತ್ತಾರೆ." ಎಂದು ಭಾವಿಕ ಜನರು ನಂಬುತ್ತಾರೆ.

## ಶ್ರೀವಿಷ್ಣುತೀರ್ಥಾಚಾರ್ಯರ ತಪಶ್ಚರ್ಯೆಯು

ಶ್ರೀವಿಷ್ಣುತೀರ್ಥರು ಇಂದ್ರಿಯನಿಗ್ರಹ, ಹರಿ ಗುರುಭಕ್ತಿ, ಶಾಂತಿ, ಶಮ, ದಮ, ಮೊದಲಾದ ಗುಣಗಳಿಂದ ಪರಿಪೂರ್ಣರಾಗಿದ್ದರು. ಶ್ರೀಮದಾ ನಂದತೀರ್ಥರು ಅದೃಶ್ಯರಾದ ಬಳಿಕ ಶ್ರೀವಿಷ್ಣುತೀರ್ಥರು ಉತ್ತರ ದಿಕ್ಕಿಗೆ ತೀರ್ಥಯಾತ್ರೆಗೋಸ್ಕರ ಹೊರಟು ಗಂಗಾದಿತೀರ್ಥಗಳಲ್ಲಿ ಸ್ನಾನಮಾಡಿ, ಪವಿತ್ರರಾದರು. ಇಷ್ಟು ಮಾತ್ರವೇ ಅಲ್ಲ, ತಮ್ಮ ಸ್ನಾನದಿಂದ ಶ್ರೀವಿಷ್ಣು ತೀರ್ಥರು ಗಂಗಾದಿತೀರ್ಥಗಳನ್ನೇ ಪವಿತ್ರ ಮಾಡಿದರು. ತದನಂತರ ಅನೇಕ ಜನ ತಪಸ್ವಿಗಳಿಗೆ ತಪಸ್ಸಿದ್ಧಿಗೆ ಸ್ಥಾನವಾದ ಹರಿಶ್ಚಂದ್ರವೆಂಬ ಪರ್ವತಕ್ಕೆ ಹೋಗಿ ಅಲ್ಲಿ ತಪಸ್ಸನ್ನು ಮಾಡಲಾರಂಭಿಸಿದರು. ಈ ಮಹರ್ಷಿಯರು ಅನ ಶನವ್ರತವನ್ನು ಕೈಕೊಂಡು, ಶೀತೋಷ್ಣ ದ್ವಂದ್ವ ದುಃಖಗಳನ್ನು ಸಹಿಸಿ, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿದರು. ಯತಿಶ್ರೇಷ್ಠರಾದ ಈ ವಿಷ್ಣುತೀರ್ಥರು, ಭಕ್ತಜನರ ಪ್ರಾರ್ಥನೆಯ ಮೇರೆಗೆ ಪರ್ವತದ ಸಮೀ ಪಕ್ಕೆ ಆ ಭಕ್ತರು ತಂದು ಕೊಡುತ್ತಿರುವ ಪಂಚಗವ್ಯವನ್ನು ಐದೈದು ದಿವಸಕ್ಕೊಮ್ಮೆ ಒಂದುಸಲ ಸ್ವಲ್ಪವಾಗಿ ಕುಡಿದು ತಪಸ್ಸನ್ನು ಮಾಡಲಾ ರಂಭಿಸಿದರು. ಮುಂದೆ ಬರಬರುತ್ತ ಮಹಾತಪಸ್ವಿಗಳಾದ ಈ ವಿಷ್ಣು ತೀರ್ಥರು ಆ ಪಂಚಗವ್ಯವನ್ನೂ ಸಹ ಬಿಟ್ಟು, ಭೂಮಿಯ ಮೇಲೆ ಬಿದ್ದ

ರುವ ಬಿಲ್ವಪತ್ರಗಳನ್ನು (ಎಂದರೆ ಬಿಲ್ವವೃಕ್ಷದ ಎಲೆಗಳನ್ನು) ತಿಂದು, ಅಥವಾ ಕೇವಲ ನೀರನ್ನು ಕುಡಿದು, ಘೋರವಾದ ತಪಸ್ಸನ್ನಾಚರಿಸಿದರು.

ಈ ವಿಷ್ಣುತೀರ್ಥರ ಶಿಷ್ಯರಾದ **ಅನಿರುದ್ಧತೀರ್ಥರು** ಉಡುಪಿಯಿಂದ ಹರಿಶ್ಚಂದ್ರಪರ್ವತಕ್ಕೆ ಬಂದು, ವಿಷ್ಣುತೀರ್ಥರನ್ನು ಕುರಿತು— "ತಾವು ಉಡುಪಿ ಕ್ಷೇತ್ರಕ್ಕೆ ದಯಮಾಡಿಸಬೇಕೆಂ"ದು ಪ್ರಾರ್ಥಿಸಿದರು. ಈ ಪ್ರಾರ್ಥನೆಯ ಮೇರೆಗೆ ಉಡುಪಿ ಕ್ಷೇತ್ರಕ್ಕೆ ಬಂದಿರುವ ಈ ವಿಷ್ಣುತೀರ್ಥಾಚಾರ್ಯರನ್ನು ನೋಡಿ, ತಮ್ಮ ಮೇಲೆ ಕೃಪೆಯನ್ನು ಮಾಡುವುದಕ್ಕಾಗಿ ಸಾಕ್ಷಾತ್ ಶ್ರೀಮಧ್ವಾಚಾರ್ಯರೇ ಬಂದಿರುವರೆಂದು ಜನರು ತಿಳಿದರು. ಈ ಸಂಗತಿಯಿಂದ ಶ್ರೀವಿಷ್ಣುತೀರ್ಥರು ಆಕಾರದಿಂದಲೂ ಗುಣಗಳಿಂದಲೂ ಶ್ರೀಮಧ್ವಾಚಾರ್ಯರನ್ನು ಹೋಲುತ್ತಿದ್ದರೆಂಬುದು ಚೆನ್ನಾಗಿ ವ್ಯಕ್ತವಾಯಿತು. ಇರಲಿ. ಆ ಬಳಿಕ ಮಹಾತಪೋನಿಧಿಗಳಾದ ವಿಷ್ಣುತೀರ್ಥರು ಉಡುಪಿಯಿಂದ ಹೊರಟು ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಸಮೀಪವಾಗಿದ್ದ ಕುಮಾರ ಪರ್ವತವನ್ನು ಏರಿ, ಅಲ್ಲಿ ತಪಸ್ಸನ್ನು ಮಾಡಲಾರಂಭಿಸಿದರು.

## ಶ್ರೀಪದ್ಮನಾಭತೀರ್ಥರ ಚರಿತ್ರೆಯು

ಇವರು ೧೧೭೯ ನೆಯ ಶಕ ವರ್ಷದ ಪಿಂಗಳನಾಮ ಸಂವತ್ಸರದ ಪುಷ್ಯ ಬಹುಳ ಸಪ್ತಮಿಯ ದಿವಸ ದ್ವೈತಮತ ಸಾಮ್ರಾಜ್ಯದ ಸಿಂಹಾಸನವನ್ನು ಆರೋಹಣ ಮಾಡಿ, ವೈದಿಕಧರ್ಮವನ್ನು ಪರಿಪಾಲಿಸುತ್ತ ದ್ವೈತ ಸಿದ್ಧಾಂತವನ್ನೂ ವಿಷ್ಣುಭಕ್ತಿಯನ್ನೂ ಎಲ್ಲ ಕಡೆಗೂ ಪ್ರಚಾರ ಮಾಡಿದರು. ಶ್ರೀಮದಾಚಾರ್ಯರು ರಚಿಸಿದ **ಅನುವ್ಯಾಖ್ಯಾನ**ವೆಂಬ ಶ್ರೇಷ್ಠವಾದ ಗ್ರಂಥಕ್ಕೆ **"ಸನ್ನ್ಯಾಯ ರತ್ನಾವಲಿ"** ಎಂಬ ಟೀಕಾ ಗ್ರಂಥವನ್ನು ಬರೆದರು. ಶ್ರೀಮಜ್ಜಯತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಎಂದರೆ (ಬ್ರಹ್ಮಚರ್ಯಾಶ್ರಮದಲ್ಲಿ) ಈ ಪದ್ಮನಾಭತೀರ್ಥರಿಂದ ಆಧ್ಯಾತ್ಮಿಕ ಶಿಕ್ಷಣವನ್ನು ಪಡೆದಿದ್ದರೆಂಬುದು ಆ ಜಯತೀರ್ಥರ ವಾಣಿಯಿಂದಲೇ ಚೆನ್ನಾಗಿ ಧ್ವನಿತವಾಗುತ್ತದೆ. ಈ ವಿಷಯವನ್ನು ಶ್ರೀಮಜ್ಜಯತೀರ್ಥರ ಚರಿತ್ರೆಯಲ್ಲಿ ವಿಶದ ಮಾಡಿ ಹೇಳುತ್ತೇವೆ. ಇರಲಿ. ಈ ಪದ್ಮನಾಭತೀರ್ಥರು ಮುಂದೆ ೧೧೮೬ ನೆಯ ಶಕ ವರ್ಷದ ರಕ್ತಾಕ್ಷಿ ಸಂವತ್ಸರದ ಕಾರ್ತಿಕ ಕೃಷ್ಣ ಚತು

ರ್ಗಶಿಯ ದಿವಸ ತುಂಗಭದ್ರಾ ನದಿಯ ತೀರದಲ್ಲಿರುವ ಆನೇಗುಂದಿಯಲ್ಲಿ ವೃಂದಾವನಸ್ಥರಾದರು.

## ಶ್ರೀಮಾಧವತೀರ್ಥರ ಚರಿತ್ರೆಯು

ಶ್ರೀಪದ್ಮನಾಭತೀರ್ಥರ ತರುವಾಯ ಈ ಮಾಧವತೀರ್ಥರು ಸಿಂಹಾಸನವನ್ನೇರಿ ದ್ವೈತಸಿದ್ಧಾಂತವನ್ನೂ ವಿಷ್ಣುಭಕ್ತಿಯನ್ನೂ ಎಲ್ಲ ಕಡೆಗೂ ಪ್ರಸಾರ ಮಾಡುವುದಕ್ಕೋಸ್ಕರ ದಿಗ್ವಿಜಯ ಮಾಡಿ, ವೈದಿಕ ಧರ್ಮವನ್ನು ಪರಿಪಾಲಿಸಿ, ಮುಂದೆ ೧೧೯೫ ನೆಯ ಶಕ ವರ್ಷದ ಶ್ರೀಮುಖ ಸಂವತ್ಸರದ ಭಾದ್ರಪದದ ಅಮಾವಾಸ್ಯೆಯ ದಿವಸ ಭೀಮಾನದಿಯ ತೀರದಲ್ಲಿರುವ ಮಣ್ಣೂರಲ್ಲಿ ವೃಂದಾವನಸ್ಥರಾದರು.

## ಶ್ರೀಅಕ್ಷೋಭ್ಯತೀರ್ಥರ ಚರಿತ್ರೆಯು

ಶ್ರೀಮಾಧವತೀರ್ಥರ ತರುವಾಯ ಶ್ರೀಅಕ್ಷೋಭ್ಯತೀರ್ಥರು ಸಿಂಹಾಸನವನ್ನಾರೋಹಣ ಮಾಡಿ, ದಿಗ್ವಿಜಯ ಮಾಡುತ್ತ ದುರ್ವಾದಿಗಳನ್ನು ಜಯಿಸುತ್ತ ಸಂಚರಿಸುತ್ತಿರಲು ಒಂದು ದಿವಸ ಭೀಮಾನದಿಯ ತೀರದಲ್ಲಿರುವ ಶ್ರೀಚಂದಲಾಪರಮೇಶ್ವರೀ ದೇವಾಲಯದಲ್ಲಿ ಬಂದು ವಿಶ್ರಮಿಸಿದರು. ಆ ಕಾಲಕ್ಕೆ ಮಹಾ ಪ್ರತಿಭಾಶಾಲಿಯಾದ ವಾದಿರಾಜನೆಂಬ ತರುಣ ರಾಜಪುತ್ರನು ಬಂದು ಇವರ ಶಿಷ್ಯತ್ವವನ್ನು ವಹಿಸಿದನು. ಈ ವೃತ್ತಾಂತವನ್ನೆಲ್ಲ ಮುಂದೆ ಶ್ರೀಜಯತೀರ್ಥರ ಚರಿತ್ರೆಯನ್ನು ಬರೆಯುವಾಗ ವಿಸ್ತಾರವಾಗಿ ಹೇಳುವೆವು. ಅರ್ಥಾತ್ ಶ್ರೀಮಜ್ಜಯತೀರ್ಥರ ಚರಿತ್ರೆಯನ್ನು ಹೇಳುವಾಗ, ಶ್ರೀ ಅಕ್ಷೋಭ್ಯತೀರ್ಥರ ಚರಿತ್ರೆಯನ್ನೂ ಶ್ರೀನರಹರಿತೀರ್ಥರ ಚರಿತ್ರೆಯನ್ನೂ ವಿಸ್ತಾರವಾಗಿ ಹೇಳಬೇಕಾಗಿದೆ. ಆದುದರಿಂದ ಪುನರುಕ್ತಿದೋಷವುಂಟಾಗಬಾರದೆಂದು ಇವರಿಬ್ಬರ ಚರಿತ್ರೆಗಳನ್ನು ಇಲ್ಲಿ ಹೆಚ್ಚು ವಿವೇಚಿಸುವುದಿಲ್ಲ.

## ಶ್ರೀನರಹರಿತೀರ್ಥರ ಚರಿತ್ರೆಯು

ಇವರು ಶ್ರೀಮಧ್ವಾಚಾರ್ಯರ ಆಜ್ಞಾನುಸಾರವಾಗಿ ಗಂಜಾಮ ದೇಶಕ್ಕೆ ೧೧೭೮ ನೆಯ ಶಕ ವರ್ಷದ ಪಿಂಗಳ ಸಂವತ್ಸರದ ಆರಂಭದಲ್ಲಿ ಹೋಗಿ, ತಮ್ಮ ಪೂರ್ವಾಶ್ರಮದ ಮನೆತನಕ್ಕೆ ವಂಶಪರಂಪರಾಗತವಾಗಿ ಬಂದ ಗಜಪತಿರಾಜರ ಮಂತ್ರಿಸ್ಥಾನವನ್ನು ಸ್ವೀಕರಿಸಿ, ನಾಲ್ಕೈದು ತಿಂಗಳು,

ರಾಜ್ಯಕಾರಭಾರವನ್ನು ಮಾಡಿ, ಆ ಗಜಾಪತಿರಾಜರ ಕೈಯಿಂದ ಮೂಲ ರಾಮ, ಸೀತಾ ಪ್ರತಿಮೆಗಳನ್ನು ಇಸುಕೊಂಡು ಬಂದು, ಶ್ರೀಮದಾಚಾರ್ಯರ ಕೈಯಲ್ಲಿ ಅವುಗಳನ್ನು ಆಶ್ವಿನ ಶುದ್ಧ ಪಂಚಮಿಯ ದಿವಸ ಕೊಟ್ಟರೆಂಬುದನ್ನು ಈ ಮೊದಲೇ ತಿಳಿಸಿದ್ದೇವೆ. ಮುಂದೆ ಮಾಘ ಶುದ್ಧ ನವಮಿಯ ದಿವಸ ಶ್ರೀಮದಾಚಾರ್ಯರು ಅದೃಶ್ಯರಾದ ಬಳಿಕ ಪುನಃ ಇವರು ಇದೇ ೧೧೭೯ ನೆಯ ಶಕ ವರ್ಷದ ಕೊನೆಗೆ ಗಂಜಾಮು ದೇಶಕ್ಕೆ ಹೋಗಿ, ೧೨೧೫ ನೆಯ ಶಕ ವರ್ಷದ ವರೆಗೆ ಆ ಗಜಪತಿರಾಜರ ಮಂತ್ರಿಗಳಾಗಿ ರಾಜ್ಯಕಾರ ಭಾರವನ್ನು ಮಾಡಿದರು. ಆ ಕಾಲದಲ್ಲಿ ೧೧೮೬, ೧೨೦೩, ೧೨೧೪, ೧೨೧೫ ನೆಯ ಶಕ ವರ್ಷಗಳಲ್ಲಿ ಗಂಜಾಮು ಜಿಲ್ಲಾ ಪೈಕಿ ಶ್ರೀಕೂರ್ಮದಲ್ಲಿಯೂ ವಿಶಾಖ ಪಟ್ಟಣಂ ಸಿಂಹಾಚಲದಲ್ಲಿಯೂ ಯೋಗಾನಂದ ನರಸಿಂಹ ದೇವಾಲಯ ಮುಂತಾದ ಗುಡಿಗಳನ್ನು ಕಟ್ಟಿಸಿ, ಶಿಲಾಲೇಖಗಳನ್ನು ಕೆತ್ತಿಸಿದ್ದಾರೆ. ಈ ನರಹರಿತೀರ್ಥರು ಶ್ರೀಮದಾಚಾರ್ಯರ ಕರ್ಮನಿರ್ಣಯ ಗ್ರಂಥಕ್ಕೆ ಟೀಕೆಯನ್ನು ಬರೆದಿದ್ದಾರೆ. ಆದರೆ ಈ ಟೀಕಾ ಗ್ರಂಥವು ಸದ್ಯಕ್ಕೆ ಉಪಲಬ್ಧವಿಲ್ಲ. ಇದೇ ಮೇರೆಗೆ ಇವರು ಶ್ರೀಮದಾಚಾರ್ಯರ ಯಮಕ ಭಾರತಕ್ಕೆ ವ್ಯಾಖ್ಯಾನವನ್ನು ಮಾಡಿದ್ದಾರೆ. ಈ ವ್ಯಾಖ್ಯಾನ ಗ್ರಂಥವೂ ಸದ್ಯಕ್ಕೆ ಉಪಲಬ್ಧವಿಲ್ಲ. ಇವರು ವ್ಯಾಸಕೂಟದಲ್ಲಿದ್ದಂತೆ ದಾಸಕೂಟದಲ್ಲಿಯೂ ಇದ್ದಾರೆ. ಕನ್ನಡದಲ್ಲಿ ವಿಷ್ಣುಸ್ತುತಿ ರೂಪವಾದ ಹಾಡುಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಒಂದು ಹಾಡನ್ನು ನಮ್ಮ ವಾಚಕರಿಗೆ ನಿವೇದಿಸುತ್ತೇವೆ.

**ರಾಗ ಆನಂದ ಭೈರವಿ ಆಟತಾಳ**

ಪಲ್ಲವಿ ॥ ಇಂತು ಮರುಳಾದೆ ॥

ಅ.ಪ.॥ಇಂತು ಮರುಳಾಗಿ ಬಯಲಿಗೆ ಬಳಲಿದೆ ರಕ್ಷಿಸಯ್ಯ ರಘುಕುಲತಿಲಕ॥

ಮಾತಿನಲ್ಲಿ ಹರಿದಾಸತನ । ನೀತಿಯಲ್ಲಿ ಬಲುಪ್ರೌಢತನ ॥
ಪ್ರೀತಿ ಧನದುರ್ವಿಷಯದಲ್ಲಿ ನಿ । ರ್ಭೀತಿ ದೈವಗುರುದ್ರೋಹದಲಿ ॥ ೧ ॥
ಏಕಾಂತದಲಿ ಧನದಗೋಷ್ಠಿ । ಲೋಕಾಂತದಲಿ ವೈರಾಗ್ಯದಗೋಷ್ಠಿ ॥
ಶ್ರೀಕಾಂತನ ಸೇವೆಗೆ ಅನುಮಾನ । ಭೂಕಾಂತನ ಸೇವೆಗೆ ಸನ್ಮಾನ ॥ ೨ ॥
ಭಜಿಸು ಬ್ರಹ್ಮಾದಿವಂದಿತ ಹರಿಯ । ತ್ಯಜಿಸು ಕಾಮಾದಿ ಶತ್ರುಗಳ ।
ಸುಜನವಂದಿತನಾದ ನರಹರಿಯ । ಭಜಿಸು ಶ್ರೀಹರಿ ರಘುಪತಿಯ ॥ ೩ ॥

# ೧೪ನೆಯ ಅಧ್ಯಾಯ

## ಶ್ರೀಮಜ್ಜಯತೀರ್ಥರ ಚರಿತ್ರೆಯು

[1]ನತ್ವಾ ಕೃಷ್ಣಂ ತಥಾ ಮಧ್ವಂ ಜಯತೀರ್ಥ ಗುರೂನಪಿ ।
ವಕ್ಷ್ಯೇಶ್ರೀಮಜ್ಜಯಾರ್ಯಾಣಾಂ ಸ್ತೋತ್ರಂ ಸರ್ವಸಮೃದ್ಧಿದಂ
॥ ೧ ॥

(ಶ್ರೀಮಜ್ಜಯತೀರ್ಥ ಪೂಜ್ಯಚರಣ ಶಿಷ್ಯವ್ಯಾಸತೀರ್ಥಃ)

ದೇವಗಿರಿಯ ಯಾದವ ವಂಶದ ಕೃಷ್ಣದೇವರಾಜನು (ಕ್ರಿ. ಶ. ೧೨೪೭–೧೨೬೦) ಉತ್ತರ ಕರ್ನಾಟಕವನ್ನು ಆಳುತ್ತಿರುವಾಗ್ಗೆ, ಈ ಅರಸನ [2]ರಾಷ್ಟ್ರಕೂಟಕನಾದ ಎಂದರೆ ಮಾಂಡಲಿಕ ರಾಜನಾದ ರಘುನಾಥ

---

೧ "ಶ್ರೀಕೃಷ್ಣನನ್ನು ಹಾಗೆಯೇ ಶ್ರೀಮನ್ಮಧ್ವಗುರುಗಳನ್ನೂ ಶ್ರೀಮಜ್ಜಯತೀರ್ಥಗುರುಗಳನ್ನೂ ಕುರಿತು ನಮಸ್ಕಾರ ಮಾಡಿ, ಶ್ರೀಮಜ್ಜಯತೀರ್ಥರ ಸರ್ವಸಮೃದ್ಧಿದಾಯಕವಾದ ಸ್ತೋತ್ರವನ್ನು ಎಂದರೆ ದಿವ್ಯಚರಿತ್ರೆಯನ್ನು ಹೇಳುವೆನು." ಎಂದು ಶ್ರೀವ್ಯಾಸತೀರ್ಥರು ತಾವು ಬರೆದ "ಶ್ರೀಜಯತೀರ್ಥವಿಜಯ" ಎಂಬ ಗ್ರಂಥದ ಆರಂಭದಲ್ಲಿ ಹೇಳಿದ್ದಾರೆ. ಈ ವ್ಯಾಸತೀರ್ಥರು ಶ್ರೀಜಯತೀರ್ಥರ ಸಾಕ್ಷಾತ್ ಶಿಷ್ಯರಾಗಿದ್ದುದರಿಂದ (ಅತಏವ ಸಮಕಾಲೀನರಾಗಿದ್ದುದರಿಂದ) ಇವರು ಬರೆದ ಶ್ರೀಜಯತೀರ್ಥರ ಚರಿತ್ರೆಯು ಪ್ರಮಾಣಕ್ಕೆ ಅರ್ಹವಾಗಿದೆ. ಇದೂ ಅಲ್ಲದೆ ಈ ವ್ಯಾಸತೀರ್ಥರು ತಾವು ಬರೆದ ಈ ಜಯತೀರ್ಥವಿಜಯ ಗ್ರಂಥದ ಕೊನೆಯ ೩೪ನೆಯ ಶ್ಲೋಕದಲ್ಲಿ—"ಗುರುಭಿರನುದಿನಂ ವರ್ಣಿತಂ ವರ್ಣಿತಂ ಮೇ ।" ಎಂದರೆ "ಗುರುಗಳು (ತಮ್ಮ ದಿವ್ಯ ಚರಿತ್ರೆಯನ್ನು) ದಿನಾಲು ಹೇಳುತ್ತಿದ್ದುದನ್ನೇ ನಾನು (ಈ ಗ್ರಂಥದಲ್ಲಿ) ಹೇಳಿರುವೆನು." ಎಂದು ಕಂಠೋಕ್ತವಾಗಿ ಹೇಳಿದ್ದರಿಂದ ಈ ಗ್ರಂಥದಲ್ಲಿಯ ಶ್ರೀಜಯತೀರ್ಥರ ಚರಿತ್ರೆಯು ಐತಿಹಾಸಿಕ ಸತ್ಯವೆಂಬುದು ಸಿದ್ಧ. ಆದ್ದರಿಂದ ಈ ವ್ಯಾಸತೀರ್ಥರು ರಚಿಸಿದ ಈ ಜಯತೀರ್ಥವಿಜಯ ಗ್ರಂಥವನ್ನೂ, ಸ್ವತಃ ಶ್ರೀಜಯತೀರ್ಥರು ತಮ್ಮ ಗ್ರಂಥಗಳಲ್ಲಿ ತಮ್ಮ ಚರಿತ್ರೆಗೆ ಪೋಷಕವಾದ ಅಂಶಗಳನ್ನು ಹೇಳಿರುವ ವಾಕ್ಯಗಳನ್ನೂ ಸುಸಂಗತವಾದ ಐತಿಹ್ಯಗಳನ್ನೂ ಆಧಾರವಾಗಿಟ್ಟುಕೊಂಡು ಈ ಚರಿತ್ರೆಯನ್ನು ಬರೆದಿದ್ದೇವೆ.

೨ ರಾಷ್ಟ್ರಕೂಟಕ ಎಂದರೆ ನಾಡಗೌಡನು ಅರ್ಥಾತ್ ನಾಡಿನ ಒಡೆಯನು = ಮಾಂಡಲಿಕ ರಾಜನು.



ಶ್ರೀಮಜ್ಜಯತೀರ್ಥರು
[ ಶ್ರೀಮಟ್ಟೀಕಾಚಾರ್ಯರು ]



ಶ್ರೀಮನ್ಮಧ್ವಾಚಾರ್ಯರು ಉಡುಪಿಯಲ್ಲಿ
ಪ್ರತಿಷ್ಠೆ ಮಾಡಿದ ಶ್ರೀಕೃಷ್ಣನ ಪ್ರತಿಮೆಯು

ಪಂತ[೧] ನಾಡಗೌಡನೆಂಬ [೨]ಕಾಣ್ವಶಾಖೆಯ ಬ್ರಾಹ್ಮಣನು, ಭೀಮಾನದಿಯ ತೀರದಲ್ಲಿರುವ ಹುರಸಗುಂಡಗಿ[೩] ಗ್ರಾಮವನ್ನು ತನ್ನ ನೆಲೆವೀಡನ್ನಾಗಿ ಮಾಡಿಕೊಂಡು ಸುಖಸಂಕಥಾ ವಿನೋದದಿಂದ '[೪]**ಸಾದಿ–ನಾಡ**'ನ್ನು ಆಳುತ್ತಿದ್ದನು. ಈ ಸಾದಿರಾಜನಿಗೆ ಒಬ್ಬ ಸುಪುತ್ರನು ಹುಟ್ಟಿದನು. ಈ ಬಾಲಕನು ಉದಂಡ ಆಯುಷ್ಯವಂತನಾಗಲೆಂದು ಈ ರಾಜಪುತ್ರನಿಗೆ '[೫]**ದುಂಡೋ ಪಂತ**' ಎಂಬ ಹೆಸರನ್ನಿಟ್ಟರು. ಈ ರಾಜಕುಮಾರನು ಶುಕ್ಲಪಕ್ಷದ ಚಂದ್ರನಂತೆ ದಿನೇದಿನೇ ಬೆಳೆಯಲಾರಂಭಿಸಿದನು. ಮುಂದೆ ೮ನೆಯ ವರ್ಷದ ವಯಸ್ಸಿನಲ್ಲಿ ಈ ಯುವರಾಜನಿಗೆ ಉಪನಯನವನ್ನು ಮಾಡಿ, ಈತನನ್ನು ಗುರುಕುಲಕ್ಕೆ ಕಳುಹಿಸಿದರು. ಈ ಯುವರಾಜರು ಗುರುಗೃಹದಲ್ಲಿ ಚೆನ್ನಾಗಿ

---

೧ 'ಪಂತ' ಎಂಬುದು 'ಪಂಡಿತ' ಎಂಬ ಶಬ್ದದ ಅಪಭ್ರಂಶವಾಗಿದೆ. ಬ್ರಾಹ್ಮಣರ ಹೆಸರಿನ ಮುಂದೆ 'ಪಂತ' ಎಂಬ ಉಪಪದವನ್ನು ಸೇರಿಸಿ, ಅವರನ್ನು ಸಂಬೋಧಿಸುವ ಸಂಪ್ರದಾಯವು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮುಂತಾದ ಭರತಖಂಡದ ಎಲ್ಲ ದೇಶಗಳಲ್ಲಿದೆ.

೨ ಶ್ರೀಜಯತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ೧ನೆಯ ಪರಿಶಿಷ್ಟದಲ್ಲಿ ಸಪ್ರಮಾಣವಾಗಿ ಸಿದ್ಧಪಡಿಸಿದ್ದೇವೆ. ಅಲ್ಲಿ ನೋಡಿರಿ.

೩ ಈಗಿನ ಕಲಬುರ್ಗಿಯ ಜಿಲ್ಹೆಯಲ್ಲಿ ಯರಗೋಳ ಗ್ರಾಮದಿಂದ ಪಶ್ಚಿಮಕ್ಕೆ ೧೨ ಮೈಲುಗಳ ಮೇಲೆ ಅಥವಾ ಸನ್ನತಿಕ್ಷೇತ್ರದ ಶ್ರೀಚಂದಲಾಪರಮೇಶ್ವರೀದೇವಿಯ ದೇವಾಲಯದಿಂದ ೨ ಮೈಲಿನ ಮೇಲೆ ಭೀಮಾನದಿಯ ತೀರದಲ್ಲಿ ಈ ಹುರಸಗುಂಡಿಗಿ ಗ್ರಾಮವಿದೆ. ಈ ಗ್ರಾಮದಲ್ಲಿ ಶ್ರೀಜಯತೀರ್ಥರ ವಂಶಜರಾದ ಶಿವರಾಮಪಂತ ನಾಡಗೌಡರೆಂಬ ಕಾಣ್ವಶಾಖೆಯ ಮಾಧ್ವ ಬ್ರಾಹ್ಮಣರು ಇದ್ದಾರೆ. ಈ ಇತಿಹಾಸವನ್ನೆಲ್ಲ "ಶ್ರೀಜಯತೀರ್ಥರ ಸ್ಥಳನಿರ್ಣಯ" ಎಂಬ ೩ನೆಯ ಪರಿಶಿಷ್ಟದಲ್ಲಿ ನೋಡಿರಿ.

೪ ಭೀಮಾತೀರದ ಕುದುರೆಗಳು ಚೆನ್ನಾಗಿರುತ್ತವೆಂದು ಹೇಳುವ ವಾಡಿಕೆಯು ಈಗಲೂ ಇದೆ. ತಾತ್ಪರ್ಯವೇನೆಂದರೆ, ಭೀಮಾತೀರದ ಈ ನಾಡಿನವರು ಶ್ರೇಷ್ಠವಾದ ಕುದುರೆಗಳನ್ನು ಹತ್ತುವುದರಲ್ಲಿ ಚತುರರಾದ್ದರಿಂದ ಈ ನಾಡಿಗೆ "ಸಾದಿ–ನಾಡು" ಎಂಬ ಹೆಸರು ಪ್ರಾಪ್ತವಾಯಿತೆಂದು ಹೇಳುವುದು ಸಯುಕ್ತಿಕವಾಗಿದೆ.

೫ ಸ್ತ್ರೀಯರು ತಮ್ಮ ಮಕ್ಕಳಿಗೆ ಎಣ್ಣೆಯನ್ನು ಹಚ್ಚುವಾಗ ಅಥವಾ ಎರೆಯುವಾಗ "ಆ ಹುಡುಗರು ಉದಂಡ ಆಯುಷ್ಯವಂತರಾಗಲೆಂ"ದು ಹೀಗೆ ಹರಸುತ್ತಾರೆ:— "ದುಂಡಿಕಲ್ಲಾಗು. ಬಂಡೆಕಲ್ಲಾಗು, ಅಗಸೆಯ ಮುಂದಿನ ಬೋರ್ಗಲ್ಲಾಗು, ಉದಂಡ ಆಯುಷ್ಯವಂತನಾಗು." ಈ ಉದ್ದೇಶದಿಂದಲೇ ದುಂಡಪ್ಪ, ಬಂಡೆಪ್ಪ, ಕಲ್ಲಪ್ಪ ಎಂದು ಮಕ್ಕಳಿಗೆ ಹೆಸರನ್ನಿಡುತ್ತಾರೆ. ಇತ್ಯರ್ಥವೇನೆಂದರೆ, ಮಕ್ಕಳು ಉದಂಡ ಆಯುಷ್ಯವಂತರಾಗಲಿ ಎಂಬುದೇ ಸರಿ.

ವಿದ್ಯಾಭ್ಯಾಸ ಮಾಡಿದ್ದಲ್ಲದೆ ಜಗದ್ಗುರುಗಳಾದ ಶ್ರೀಪದ್ಮನಾಭತೀರ್ಥ ಶ್ರೀಪಾದಂಗಳವರ ಬಳಿಯಲ್ಲಿ ಆಧ್ಯಾತ್ಮಿಕ ಶಿಕ್ಷಣವನ್ನು ಪಡೆದರು. ಸ್ವತಃ ಈ ಯುವರಾಜರೇ ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಬಳಿಕ ತಾವು ಬರೆದ "ಶ್ರೀಗೀತಾ ತಾತ್ಪರ್ಯನಿರ್ಣಯ" ಗ್ರಂಥದ ಟೀಕೆಯ ಆದಿಯಲ್ಲಿ–ಶ್ರೀಪದ್ಮನಾಭತೀರ್ಥರಿಗೂ ತಮಗೂ ಗುರುಶಿಷ್ಯ ಸಂಬಂಧವಿರುತ್ತದೆಂಬುದನ್ನು ಹೀಗೆ ವ್ಯಕ್ತಪಡಿಸಿದ್ದಾರೆ:—

ಸಪದ್ಮನಾಭತೀರ್ಥಾರ್ಕ ಗೋಗಣೋಽಸ್ತು ದೃಶೇಮಮ ।
ಸತತ್ತ್ವಮಾರ್ಗೇಗಮನಂ ವಿನಾಯದುಪಜೀವನಮ್ ॥ ೩ ॥
ಪ್ರಣಮ್ಯಚರಣ ದ್ವಂದ್ವಂ ಗುರೂಣಾಂ ತತ್ಕೃಪಾಬಲಾತ್ ।
ವ್ಯಾಕರಿಷ್ಯೇ ಯಥಾಬೋಧಂ ಗೀತಾತಾತ್ಪರ್ಯನಿರ್ಣಯಂ ॥೪॥

**ಅರ್ಥ:**—ತತ್ತ್ವಮಾರ್ಗದಲ್ಲಿ ಎಂದರೆ ಆಧ್ಯಾತ್ಮಿಕ ಜ್ಞಾನಮಾರ್ಗದಲ್ಲಿ ಗಮನ ಮಾಡುವುದಕ್ಕೆ ಯಾರ ಹೊರತು ಗತ್ಯಂತರವಿಲ್ಲವೋ ಅಂಥ ಪದ್ಮನಾಭತೀರ್ಥರೆಂಬ ಸೂರ್ಯನ (ವಾಣಿಯೆಂಬ) ಕಿರಣ ಸಮೂಹವು ಎಂದರೆ ಪ್ರಕಾಶವು ನಮಗೆ ಜ್ಞಾನದೃಷ್ಟಿಯನ್ನು ದಯೆಪಾಲಿಸಲಿ. (೩) ಗುರುಗಳ ಚರಣದ್ವಯಗಳನ್ನು ನಮಸ್ಕರಿಸಿ, ಅವರ ಕೃಪಾಬಲದಿಂದ ಯಥಾಬೋಧವಾಗಿ ಗೀತಾತಾತ್ಪರ್ಯನಿರ್ಣಯವನ್ನು ಸ್ಪಷ್ಟೀಕರಿಸುತ್ತೇನೆ. (೪)

ಇದೇ ಮೇರೆಗೆ ಈ ಯುವರಾಜರು ಎಂದರೆ ಶ್ರೀಮಜ್ಜಯತೀರ್ಥರು ತಾವು ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಬರೆದ "ತತ್ತ್ವಪ್ರಕಾಶಿಕಾ" ಎಂಬ ಟೀಕೆಯ ಮಂಗಲಾಚರಣದಲ್ಲಿ ಮೊದಲು ಶ್ರೀಪದ್ಮನಾಭತೀರ್ಥರನ್ನು ಸ್ತುತಿಸಿ,[೧] ತದನಂತರ ಶ್ರೀಅಕ್ಷೋಭ್ಯತೀರ್ಥರನ್ನು ಸ್ತುತಿಸಿದ್ದಾರೆ. ಆದರೆ ಶ್ರೀಮಾಧವತೀರ್ಥರನ್ನಾಗಲಿ, ಶ್ರೀನರಹರಿತೀರ್ಥರನ್ನಾಗಲಿ, ಎಲ್ಲಿಯೂ ಸ್ತುತಿಸಿರುವುದಿಲ್ಲ. ಈ ಜಯತೀರ್ಥರು ಶ್ರೀಅಕ್ಷೋ

೧ ಶ್ರೀಮಧ್ವಸಂಸೇವನಲಬ್ಧ ಶುದ್ಧವಿದ್ಯಾಸುಧಾಂಭೋನಿಧಯೋಽಮಲಾಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಸ್ಸ್ಯಾನ್ಮಯಿ ನಿತ್ಯಮೇಷಾಂ ॥೪॥

ಅರ್ಥ:—ಶ್ರೀಮನ್ಮಧ್ವಾಚಾರ್ಯರ ಸೇವೆಯನ್ನು ಚೆನ್ನಾಗಿ ಮಾಡಿ, ಅಗಾಧವಾದ ಶುದ್ಧವಿದ್ಯಾಮೃತವನ್ನು ಪಡೆದಂಥ ದಯಾಸಾಗರರಾದ ಮತ್ತು ನಿರಂಜನರಾದ ಶ್ರೀಪದ್ಮನಾಭತೀರ್ಥರ ಕೃಪೆಯಲೇಶವು ನನ್ನ ಮೇಲೆ ಯಾವಾಗಲೂ ಇರಲಿ.

ಪ್ಯತೀರ್ಥರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದರಿಂದ ಈ ಅಕ್ಷೋಭ್ಯ ತೀರ್ಥಗುರುಗಳನ್ನು ಸ್ತುತಿಸುವುದು ಸ್ವಾಭಾವಿಕವಾಗಿದೆ. ಆದರೆ ವಿಶೇಷತಃ ಶ್ರೀಪದ್ಮನಾಭತೀರ್ಥರನ್ನು ಸ್ತುತಿಸಿರುವುದನ್ನು ನೋಡಿದರೆ, ಈ ಜಯತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಎಂದರೆ ಬ್ರಹ್ಮಚರ್ಯಾಶ್ರಮದಲ್ಲಿ ಶ್ರೀಪದ್ಮನಾಭತೀರ್ಥಗುರುಗಳಿಂದ ಆಧ್ಯಾತ್ಮಿಕ ಶಿಕ್ಷಣವನ್ನು ಹೊಂದಿದ್ದಾರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಸಾರಾಂಶ, ಈ ಯುವರಾಜರು ಬ್ರಹ್ಮಚರ್ಯಾಶ್ರಮದಲ್ಲಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿ, ಆಧ್ಯಾತ್ಮಿಕ ಶಿಕ್ಷಣವನ್ನು ಹೊಂದಿದ್ದಲ್ಲದೆ ತಮ್ಮ ಕ್ಷಾತ್ರವೃತ್ತಿಗೆ ಉಚಿತವಾದಂಥ ರಾಜನೀತಿಶಾಸ್ತ್ರದಲ್ಲಿಯೂ ಯುದ್ಧಶಾಸ್ತ್ರದಲ್ಲಿಯೂ ಸಹ ನಿಷ್ಣಾತರಾದರು. ಇವರು ಸ್ವಭಾವತಃ ಶೂರರೂ ಧೀರರೂ ಆಗಿದ್ದರು. ಈ ಯುವರಾಜರು ವಿದ್ಯಾಭ್ಯಾಸವನ್ನು ಮುಗಿಸಿದ ಬಳಿಕ ೨೦ ಅಥವಾ ೨೧ನೆಯ ವರ್ಷದ ವಯಸ್ಸಿನಲ್ಲಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದರು. ತದನಂತರ ಇವರು ಯುವರಾಜಸ್ಥಾನದ ಕರ್ತವ್ಯಗಳನ್ನು ದಕ್ಷತೆಯಿಂದ ಮಾಡುತ್ತ ಸುಖಸಂಕಥಾ ವಿನೋದದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿರಲು, ಒಂದಾನೊಂದು ದಿವಸ ಇವರ ಜೀವನದಲ್ಲಿ ಕ್ರಾಂತಿಯನ್ನುಂಟು ಮಾಡುವ ಒಂದು ಸುಯೋಗವು ಪ್ರಾಪ್ತವಾಯಿತು. ಅದೇನಂದರೆ ಒಂದು ದಿವಸ ಸಾದಿನಾಡಿನ ಈ ಯುವರಾಜನು ತನ್ನ ರಾವುತರನ್ನು ಸಂಗಡ ಕರೆದುಕೊಂಡು, ಬೇಟೆಯನ್ನಾಡುವುದಕ್ಕೆ ೧ಬೆಟ್ಟಗುಡ್ಡಗಳ ಕಡೆಗೆ ಹೋಗಿ, ಬೇಟೆಯನ್ನಾಡಿ ಮಧ್ಯಾಹ್ನ ಸಮಯದಲ್ಲಿ ನೀರಡಿಸಿ, ನೀರನ್ನು ಕುಡಿಯುವುದಕ್ಕೋಸ್ಕರ ಶ್ರೀ ಚಂದಲಾಪರಮೇಶ್ವರೀದೇವಿಯ ೨ಗುಡಿಯ ಬಳಿಯಲ್ಲಿ ಹರಿಯುತ್ತಿರುವ ಭೀಮಾನದಿಗೆ ಬಂದನು. ಅದೇ ಕಾಲಕ್ಕೆ ಕರ್ಮಧರ್ಮಸಂಯೋಗದಿಂದ

---

೧ ಈ ಸಾದಿನಾಡು ಬೈಲುಸೀಮೆಯಾಗಿದೆ. ಮಲೆನಾಡಿನಲ್ಲಿದ್ದಂತೆ ಈ ಬೈಲುಸೀಮೆಯಲ್ಲಿ ಅರಣ್ಯವಿಲ್ಲ. ಈ ಸಾದಿನಾಡಿನಲ್ಲಿ ಬೆಟ್ಟಗುಡ್ಡಗಳು ಮಾತ್ರ ಬಹಳ. ಈ ಗುಡ್ಡಗಳಲ್ಲಿಯ ದರಿ-ಕಂದರಗಳಲ್ಲಿಯೇ ಹುಲಿ, ತೋಳ ಮುಂತಾದ ಕ್ರೂರಮೃಗಗಳು ವಾಸಮಾಡಿರುತ್ತವೆ. ಆದ್ದರಿಂದ ಈ ದೇಶದಲ್ಲಿ ಬೇಟೆಯನ್ನಾಡುವುದಕ್ಕೆ ಬೆಟ್ಟಗುಡ್ಡಗಳ ಕಡೆಗೆ ಹೋಗುತ್ತಾರೆ

೨ ಶ್ರೀಚಂದಲಾಪರಮೇಶ್ವರೀದೇವಿಯ ಗುಡಿಯು, ಹುರಸಗುಂದಗಿ ಗ್ರಾಮದಿಂದ ಉತ್ತರಕ್ಕೆ ೨ ಮೈಲುಗಳ ಮೇಲೆ ಇದೆ.

ಶ್ರೀಅಕ್ಷೋಭ್ಯತೀರ್ಥಸ್ವಾಮಿಗಳವರು ಸಂಚಾರ ಮಾಡುತ್ತ ಮಾಡುತ್ತ ಇಲ್ಲಿಗೆ ಬಂದು, ಕೇವಲ ಭೀಮಾನದಿಯ ಆಚೆಯ ದಂಡೆಯ ಮೇಲಿರುವ ಶ್ರೀ ಚಂದಲಾಪರಮೇಶ್ವರೀ ದೇವಿಯ ಗುಡಿಯಲ್ಲಿ ವಿಶ್ರಮಿಸಿದ್ದರು. ಆ ಸಮಯದಲ್ಲಿ ಈ ಯುವರಾಜನು ಈ ದೇವಿಯ ಪರಮಪವಿತ್ರವಾದ ಸನ್ನಿಧಾನದಲ್ಲಿ ಹರಿಯುತ್ತಿರುವ ಭೀಮಾನದಿಯಲ್ಲಿ ಪಶುಗಳ ಹಾಗೆ ನದಿಗೆ ಬಾಯಿಯನ್ನು ಹಚ್ಚಿ, ನೀರನ್ನು ಕುಡಿಯುತ್ತಿರಲು, ಇವನನ್ನು ಶ್ರೀ ಅಕ್ಷೋಭ್ಯತೀರ್ಥರು ನೋಡಿ, ಕರೆದು, "ಕಿಂ ಪಶುಃ ಪೂರ್ವದೇಹೇ ?" ಎಂದರೆ "ಹಿಂದಿನ ಜನ್ಮದಲ್ಲಿ ನೀನು ಪಶುವಾಗಿದ್ದೆಯೇನು ?" ಎಂದು ಈತನಿಗೆ ಪ್ರಶ್ನ ಮಾಡಲು, ಈ ಪ್ರಶ್ನವನ್ನು ಕೇಳಿದಾಕ್ಷಣವೇ ಈ ಯುವರಾಜನಿಗೆ ವೈರಾಗ್ಯವು ಪ್ರಾಪ್ತವಾಗಿ, ಈತನು "ನನಗೆ ಸನ್ಯಾಸಾಶ್ರಮವನ್ನು ಕೊಡಿರಿ" ಎಂದು ಶ್ರೀಅಕ್ಷೋಭ್ಯತೀರ್ಥರನ್ನು ಕುರಿತು ಪ್ರಾರ್ಥಿಸಿದನು. ಆಗ ಗುರುವರ್ಯರಾದ ಶ್ರೀಅಕ್ಷೋಭ್ಯತೀರ್ಥರು ಈತನನ್ನು ಕುರಿತು:— "ನೀನು ವೈಭವವನ್ನು ತ್ಯಾಗಮಾಡಿ, ಯತ್ಯಾಶ್ರಮವನ್ನು ಸ್ವೀಕಾರ ಮಾಡಿದರೆ, ಪುತ್ರವಿರಹದಿಂದ ನಿನ್ನ ತಂದೆಯು ನನ್ನನ್ನು ಸಂಹಾರ ಮಾಡಿಬಿಟ್ಟಾನು." ಎಂದು ನುಡಿದರು. ಈ ಮಾತಿಗೆ ಆ ಯುವರಾಜನು ಹೇಳಿದ್ದೇನೆಂದರೆ:–"ನನ್ನ ತಂದೆಯು ನಿಮ್ಮನ್ನು ಕೊಲ್ಲುವ ಇಚ್ಛೆಯಿಂದ ಇಲ್ಲಿಗೆ ಬಂದರೆ, ತಂದೆಗೆ ನಾನು ಹೀಗೆ ಹೇಳುತ್ತೇನೆ:–"ನಾನು ಸ್ವೇಚ್ಛೆಯಿಂದ ಈ ಶ್ರೇಷ್ಠವಾದ ಆಶ್ರಮನ್ನು ಹೊಂದಿದ್ದೇನೆಯೇ ಹೊರತು ಈ ಆಶ್ರಮವನ್ನು ನನಗೆ ಯಾರೂ ಬಲಾತ್ಕಾರದಿಂದ ಕೊಟ್ಟಿರುವುದಿಲ್ಲ."

ಈ ಪ್ರಕಾರ ಆ ಯುವರಾಜನು ಹೇಳಿದ ಬಳಿಕ ಗುರುವರ್ಯರು–ಈ ರಾಜಪುತ್ರನು ರಾಮದೇವರ ಆರಾಧನೆಯನ್ನು ಮಾಡುವುದಕ್ಕೆ ಯೋಗ್ಯನಾಗಿದ್ದಾನೆ, ಎಂದರೆ ಪೀಠಾರೋಹಣವನ್ನು ಮಾಡುವುದಕ್ಕೆ ಅರ್ಹನಾಗಿದ್ದಾನೆಂದು ತಿಳಿದು, ಇವನಿಗೆ ಯತ್ಯಾಶ್ರಮವನ್ನು ಕೊಟ್ಟು 'ಜಯತೀರ್ಥ' ಎಂಬ ಆಶ್ರಮ ನಾಮವನ್ನು ಇಟ್ಟರು.

ಮಗನು ಯತ್ಯಾಶ್ರಮವನ್ನು ಸ್ವೀಕರಿಸಿದನೆಂಬ ಸುದ್ದಿಯು ಸಾದಿರಾಜನ ಕಿವಿಗೆ ಹೋಗಿ ಮುಟ್ಟಿತು ! ಕೂಡಲೇ ಆ ರಾಜನು ದುಃಖದಿಂದ ಸಂತಪ್ತನಾಗಿ, ಮಗನಿಗೆ ಸನ್ಯಾಸಾಶ್ರಮವನ್ನು ಕೊಟ್ಟ ಅಕ್ಷೋಭ್ಯತೀರ್ಥ

ರನ್ನು ಸಂಹಾರ ಮಾಡುವುದಕ್ಕೋಸ್ಕರ ಸೈನ್ಯಸಮೇತನಾಗಿ ಶ್ರೀಚಂದಲಾ ಪರಮೇಶ್ವರೀ ದೇವಿಯ ಗುಡಿಗೆ ಬಂದು, ಅಲ್ಲಿದ್ದ ಶ್ರೀಅಕ್ಷೋಭ್ಯತೀರ್ಥ ರನ್ನು ಕುರಿತು–''ಎಲೈ ನಿರ್ದಯನಾದ ಯತಿಯೇ! ಶೋಕಮೋಹಗಳನ್ನು ತಿಳಿಯದವನಾಗಿ ನೀನು ನನ್ನ ಮಗನನ್ನು ರಾಜ್ಯಹೀನನನ್ನಾಗಿಯೂ ಭಾರ್ಯಾಹೀನನನ್ನಾಗಿಯೂ ಮಾಡಿದೆ.'' ಎಂದು ಸಿಟ್ಟಿನಿಂದ ನುಡಿದನು. ಈ ಮಾತಿಗೆ ಶ್ರೀಅಕ್ಷೋಭ್ಯತೀರ್ಥ ಗುರುವರ್ಯರು ಆ ರಾಜನನ್ನು ಕುರಿತು– ''ಎಲೈ ನೀನು ನಿನ್ನ ಮಗನಲ್ಲಿ ಅಷ್ಟು ಪ್ರೇಮವುಳ್ಳವನಾಗಿದ್ದರೆ, ಈತನನ್ನು ಈಗಲೇ ಮನೆಗೆ ಕರೆದುಕೊಂಡು ಹೋಗು'' ಎಂದು ಹೇಳಿದರು.ಆಗ ಆತನು ತನ್ನ ಮಗನನ್ನು ನಿಜವಾಗಿಯೇ ಮನೆಗೆ ಕರೆದುಕೊಂಡು ಹೋದನು.ಮತ್ತು ಆತನನ್ನು ಮನೋಹರವಾದ ಸುರತಗೃಹದಲ್ಲಿ ಪ್ರವೇಶ ಮಾಡಿಸಿ, ಆತನ ಹೆಂಡತಿಗೆ ಎಂದರೆ ತನ್ನ ಸೊಸೆಗೆ, ವಸ್ತ್ರಾಭರಣಗಳಿಂದ ಭೂಷಿತಳಾಗಿ ಆ ಸುರತಗೃಹದಲ್ಲಿ ಹೋಗುವುದಕ್ಕೆ ಆಜ್ಞಾಪಿಸಿದನು. ಅದೇ ಪ್ರಕಾರ ಆ ಯುವರಾಜಪತ್ನಿಯು ವಸ್ತ್ರಾಭರಣಗಳಿಂದ ಅಲಂಕೃತಳಾಗಿ ಅದರಲ್ಲಿ ಪ್ರವೇಶಮಾಡಿದಳು. ಆದರೇನು? ವೀರವೈರಾಗ್ಯದಿಂದ ಕುಳಿತುಕೊಂಡಂಥ ತನ್ನ ಪತಿಯಾದ ಆ ನೂತನಯತಿಯ ಮುಖದ ಮೇಲಿನ ಬ್ರಹ್ಮತೇಜಸ್ಸನ್ನು ನೋಡಿ, ಆತನ ಬಳಿಗೆ ಹೋಗುವುದಕ್ಕೆ ಸಮರ್ಥಳಾಗದೆ, ಹಾಗೆಯೇ ತಿರುಗಿ ಹೊರಗೆ ಬಂದು, ತನ್ನ ಅತ್ತೆ, ಮಾವ ಮೊದಲಾದ ಸಮಸ್ತ ಆಪ್ತ ವರ್ಗದವರನ್ನು ಕುರಿತು–''ನನ್ನ ಪತಿವರ್ಯರ ದಿವ್ಯತೇಜಸ್ವಿತೆಯನ್ನು ನೋಡಲು ಸಹ ನಾನು ಸಮರ್ಥಳಾಗಲಾರೆನು.'' ಎಂದು ಹೇಳಿದಳು. ಈ ಮಾತನ್ನು ಕೇಳಿ ಆ ನಾದಿರಾಜನು ತನ್ನ ಮಗನನ್ನು ಶ್ರೀಅಕ್ಷೋಭ್ಯ ತೀರ್ಥರಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗಿ, ಇವನ ಸಂಗಡ ನಾನು ಹೋರಾಡಲಾರೆನೆಂದು ಸಿಟ್ಟಿನಿಂದ ನುಡಿದನು. ಆಗ ಆ ಯುವರಾಜನು, ತನ್ನ ಆಪ್ತಜನ ಸಮೇತನಾಗಿ ಕ್ರೋಧಾವೇಶದಿಂದ ಬಂದಂಥ ತನ್ನ ತಂದೆ ಯನ್ನು ಕುರಿತು-''ಅಪ್ಪಾ! ನಾನು ನನ್ನ ಇಚ್ಛೆಯಿಂದಲೇ ಈ ಸನ್ಯಾಸಾ ಶ್ರಮವನ್ನು ಬೇಡಿಕೊಂಡು, ಸ್ವೀಕರಿಸಿದ್ದೇನೆ. ವಸ್ತುಸ್ಥಿತಿಯು ಹೀಗಿದ್ದು ದರಿಂದ ನೀನು ಈ ಯತೀಂದ್ರರ ಮೇಲೆ ಕೋಪಿಸದೆ, ಈ ಗುರುವರ್ಯ ರನ್ನು ಪ್ರಾರ್ಥಿಸಿ, ಯಾವಾಗಲೂ ಶ್ರೀಹರಿಭಕ್ತನಾಗಿದ್ದುಕೊಂಡು, ನಿನ್ನ

ಇನ್ನೊಬ್ಬ ಚಿಕ್ಕಮಗನ ಕಡೆಗೆ ದೃಷ್ಟಿಯನ್ನಿಟ್ಟು, ಈ ದುಃಖವನ್ನು ಮರೆತು ಬಿಡು. ಹಾಗೂ ಸಜ್ಜನರಲ್ಲಿ ಆದರವುಳ್ಳವನಾಗಿ ಅವರನ್ನು ಮಕ್ಕಳಂತೆ ಪಾಲಿಸು.'' ಎಂದು ವಿನಯದಿಂದ ಹೇಳಿದನು. ಈ ಪ್ರಕಾರ ಮಗನು ಹೇಳಿದ ಹಿತಕರವಾದ ಮಾತುಗಳಿಂದ ಸಮಾಧಾನವನ್ನು ಹೊಂದಿ, ಶಾಂತ ಮನಸ್ಸುಳ್ಳವನಾಗಿ ಆ ಸಾದಿರಾಜನು ತಿರುಗಿ ಮನೆಗೆ ಬಂದನು. ಇತ್ತ ಈ ಜಯತೀರ್ಥರು, ತಮ್ಮ ಗುರುವರ್ಯರಾದ ಅಕ್ಷೋಭ್ಯತೀರ್ಥರ ಅಪ್ಪಣೆಯನ್ನು ಪಡೆದು ದಿಗ್ವಿಜಯಕ್ಕೆ ಹೊರಟು, ತಮ್ಮ ದರ್ಶನ, ಉಪದೇಶ ಮೊದಲಾದವುಗಳಿಂದ ಸಕಲ ಸಜ್ಜನರನ್ನು ಪಾವನ ಮಾಡುತ್ತ ಪ್ರತಿ ಸಮ್ಮತವಾದ ತರ್ಕಗಳಿಂದ ವಿಷ್ಣುಸರ್ವೋತ್ತಮತ್ವವನ್ನು ಸಿದ್ಧ ಮಾಡುತ್ತ ಎಲ್ಲ ಕಡೆಗೂ ಸಂಚರಿಸಿ, ಸಕಲ ದುರ್ವಾದಿಗಳನ್ನು ಜಯಿಸಿದರು.

ಈ ಪ್ರಕಾರ ಶ್ರೀಜಯತೀರ್ಥರು ದುರ್ವಾದಿಗಳನ್ನು ಜಯಿಸಿ, ತಮ್ಮ ಗುರುಗಳಾದ ಶ್ರೀಮದಕ್ಷೋಭ್ಯತೀರ್ಥರ ಸಮೀಪಕ್ಕೆ ಬಂದು, ಭಕ್ತಿ ನಮ್ರರಾಗಿ ದಿನಾಲೂ ಮಧ್ವಮತ ಸಿದ್ಧಾಂತಗಳನ್ನು ಶ್ರವಣ ಮಾಡಿದರು. ಎಂದರೆ ಶ್ರೀಜಯತೀರ್ಥರು ಶ್ರೀಅಕ್ಷೋಭ್ಯತೀರ್ಥಗುರುಗಳ ಬಳಿಯಲ್ಲಿ ಶ್ರೀಮನ್ಮಧ್ವಾಚಾರ್ಯರ ೩೭ ಗ್ರಂಥಗಳನ್ನೂ ಚೆನ್ನಾಗಿ ಅಧ್ಯಯನ ಮಾಡಿದರು. ಈ ಮಾತನ್ನು ಸ್ವತಃ ಶ್ರೀಮಜ್ಜಯತೀರ್ಥರೇ ''ಗೀತಾಭಾಷ್ಯ ಟೀಕೆ''ಯ ಕೊನೆಯಲ್ಲಿ ಕಂಠೋಕ್ತವಾಗಿ ಹೀಗೆ ಹೇಳಿದ್ದಾರೆ:—

ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯಮೇ ।
ವಚೋಭಿರಮೃತ ಪ್ರಾಯೈಃ ಪ್ರೀಯಂತಾಂ ಸತತಂ ಬುಧಾಃ ॥೩॥

**ಅರ್ಥ:**—ಶ್ರೀಅಕ್ಷೋಭ್ಯತೀರ್ಥ ಗುರುಗಳಿಂದ ಗಿಳಿಯಂತೆ ಶಿಕ್ಷಣವನ್ನು ಹೊಂದಿದಂಥ ನನ್ನ ಅಮೃತಸದೃಶವಾದ ವಚನಗಳಿಂದ ಪಂಡಿತರು ಯಾವಾಗಲೂ ಸಂತುಷ್ಟರಾಗಲಿ.

ಇತ್ಯರ್ಥವೇನಂದರೆ, ಶ್ರೀಅಕ್ಷೋಭ್ಯತೀರ್ಥರು ತಮ್ಮ ಶಿಷ್ಯರಾದ ಶ್ರೀಜಯತೀರ್ಥರಿಗೆ ಪಾಠಪ್ರವಚನವನ್ನು ಹೇಳಿ, ಅವರನ್ನು ದ್ವೈತಸಿದ್ಧಾಂತದಲ್ಲಿ ನಿಷ್ಣಾತರನ್ನಾಗಿ ಮಾಡಿದರು. ಮತ್ತು ದುರ್ವಾದಿಗಳನ್ನು ಗೆದ್ದು, ದ್ವೈತಸಿದ್ಧಾಂತವನ್ನೂ ವಿಷ್ಣುಭಕ್ತಿಯನ್ನೂ ಎಲ್ಲ ಕಡೆಗೂ ಪ್ರಸಾರ ಮಾಡಿದರು. ಈ ಪ್ರಕಾರ ೧೭ ವರ್ಷಗಳು ಕ್ರಮಿಸುತ್ತಿರಲು, ಕೊನೆಗೆ

ಶ್ರೀಅಕ್ಷೋಭ್ಯತೀರ್ಥರು ತಮ್ಮ ಎಲ್ಲ ಪೀಠಾಧಿಪತ್ಯವನ್ನು ಶ್ರೀಜಯ ತೀರ್ಥರ ವಶಕ್ಕೆ ಒಪ್ಪಿಸಿ, ೧೨೬೨ನೆಯ ಶಕ ವರ್ಷದ ವಿಕೃತಿಸಂವತ್ಸರದ ಮಾರ್ಗಶೀರ್ಷ ಬಹುಳ ಪಂಚಮಿಯ ದಿವಸ ಪರಂಧಾಮ[1]ಕ್ಕೆ ತೆರಳಿದರು.

ಶ್ರೀಜಯತೀರ್ಥರು ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ತಾವು ಬರೆದ "ತತ್ತ್ವ ಪ್ರಕಾಶಿಕಾ" ಎಂಬ ಟೀಕೆಯ ಮಂಗಲಾಚರಣ ದಲ್ಲಿ ಶ್ರೀಅಕ್ಷೋಭ್ಯತೀರ್ಥ ಗುರುಗಳನ್ನು ಹೀಗೆ ಸ್ತುತಿಸಿದ್ದಾರೆ:—

ದುರ್ವಾದಿವಾರಣವಿದಾರಣದಕ್ಷದೀಕ್ಷಮಕ್ಷೋಭ್ಯತೀರ್ಥ -
ಮೃಗರಾಜಮಹಂ ನಮಾಮಿ ॥ ೫ ॥

**ಅರ್ಥ:**—ಅಶಾಸ್ತ್ರೀಯವಾಗಿ ವಾದಮಾಡುವಂಥ ದುರ್ವಾದಿಗ ಳೆಂಬ ಆನೆಗಳನ್ನು ಸೀಳಿ ಹಾಕುವುದಕ್ಕೆ ದಕ್ಷತೆಯಿಂದ ಕಂಕಣಬದ್ಧರಾ ದಂಥ ಅಕ್ಷೋಭ್ಯತೀರ್ಥರೆಂಬ ಸಿಂಹನಿಗೆ ನಾನು ನಮಸ್ಕರಿಸುತ್ತೇನೆ.

ಸಾರಾಂಶ,ಶ್ರೀಜಯತೀರ್ಥರು, ತಮ್ಮ ಗುರುಗಳಾದ "ಶ್ರೀಅಕ್ಷೋ ಭ್ಯತೀರ್ಥರು ಅನೇಕ ಜನ ದುರ್ವಾದಿಗಳನ್ನು ಗೆದ್ದರೆಂ"ಬುದನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ.

ಹೀಗೆ ಪೀಠಾಧಿಪತ್ಯವು ಪ್ರಾಪ್ತವಾದ ಬಳಿಕ "ಶ್ರೀಜಯತೀರ್ಥರು [2]ಶ್ರೀದುರ್ಗಾದೇವಿಯನ್ನು ಕುರಿತು ಮಹತ್ತರವಾದ ತಪಸ್ಸನ್ನು ಮಾಡಿ, [3]ಬೆಟ್ಟದಿಕೆಯನ್ನೂ(ಎಂದರೆ ಮಸಿಯನ್ನೂ) ಮತ್ತು [4]ಕಂಟವನ್ನೂ (ಎಂದರೆ

೧ ಈ ಶ್ರೀಅಕ್ಷೋಭ್ಯತೀರ್ಥರ ವೃಂದಾವನವು ಮಳಖೇಡ ಗ್ರಾಮದಲ್ಲಿ ಕಾಗಿಣೀ ನದಿಯ ತೀರದಲ್ಲಿದೆ.

೨ ಸನ್ನತಿ ಕ್ಷೇತ್ರದಲ್ಲಿ ಭೀಮಾತೀರದಲ್ಲಿರುವ ಶ್ರೀಚಂದಲಾಪರಮೇಶ್ವರೀ ದೇವಿಯ ಎಡಭಾಗ ದಲ್ಲಿ ಅತ್ಯಂತ ಸುಂದರವಾದಂಥ ಮತ್ತು ಭವ್ಯವಾದಂಥ ಶ್ರೀದುರ್ಗಾದೇವಿಯು ಇದ್ದಾಳೆ. ಈ ದುರ್ಗಾದೇವಿಯೂ ಈ ಚಂದಲಾಪರಮೇಶ್ವರೀ ದೇವಿಯೂ ಶ್ರೀಜಯತೀರ್ಥರ ವಂಶಜರಾದ ಪುರಸ ಗುಂಡಗಿ ಗ್ರಾಮದ ಶಿವರಾಮಪಂತ ನಾಡಗೌಡರ ಮನೆತನದ ಕುಲದೇವತೆಗಳಾಗಿದ್ದಾರೆ.

೩ ಬೆಟ್ಟದಿಕೆಯನ್ನು ಸುಟ್ಟು ಅದರ ಇದ್ದಲಿಯಿಂದ ಉತ್ತಮವಾದ ಮಸಿಯನ್ನು ಮಾಡು ವ ಸಂಪ್ರದಾಯವು ಪ್ರಾಚೀನಕಾಲದಲ್ಲಿತ್ತು. ಈಗಲೂ ಕಾರವಾರ ಜಿಲ್ಲೆಯಲ್ಲಿರುವ ಹವ್ಯಕ ಬ್ರಾಹ್ಮ ಣರು ಮಾಡುತ್ತಾರೆ.

೪ ಕಂಟದಿಂದ ಎಂದರೆ ಉಕ್ಕಿನ ಅಥವಾ ಕಬ್ಬಿಣದ ಲೆಕ್ಕಣಿಕೆಯಿಂದ ತಾಡಪತ್ರದ ಮೇಲೆ ಲೇಖನವನ್ನು ಕೆತ್ತುತ್ತಿದ್ದರು. ಆ ಬಳಿಕ ಬೆಟ್ಟದಿಕೆಯ ಇದ್ದಲಿಯಿಂದ ನಿರ್ಮಿಸಿದ ಮಸಿಯನ್ನು ಆ ಅಕ್ಷರಗಳಲ್ಲಿ ತುಂಬುತ್ತಿದ್ದರು. ಈ 'ಜಯತೀರ್ಥವಿಜಯದಲ್ಲಿ ಕಂಟಾ ಎಂಬವನ್ನು ಸ್ಥಳದಲ್ಲಿ ಘಂಟಾ ಎಂದು ತಪ್ಪು ಬಿದ್ದಿದೆ.

ಉಕ್ಕಿನ ಲೆಕ್ಕಣಿಕೆಯನ್ನೂ) ಶ್ರೀದುರ್ಗಾದೇವಿಯಿಂದ ಪಡೆದುಕೊಂಡರು.'' ಎಂಬುದೊಂದು ಐತಿಹ್ಯವನ್ನು ವ್ಯಾಸತೀರ್ಥರು ತಮ್ಮ 'ಜಯತೀರ್ಥ ವಿಜಯ'ದಲ್ಲಿ ಹೇಳಿದ್ದಾರೆ. ಅರ್ಥಾತ್ ಶ್ರೀಜಯತೀರ್ಥರು ಪೀಠಾಧಿಪತ್ಯವು ಪ್ರಾಪ್ತವಾದ ಕೂಡಲೇ ಗ್ರಂಥರಚನೆಯ ಕಾರ್ಯಕ್ಕೆ ಉದ್ಯುಕ್ತರಾದರೆಂಬುದನ್ನು ಹೇಳುವುದೇ ಈ ಆಖ್ಯಾಯಿಕೆಯ ಧ್ವನಿತಾರ್ಥವಾಗಿದೆ. ಇರಲಿ.

ಪೀಠಾಧಿಪತ್ಯವು ಪ್ರಾಪ್ತವಾದ ಬಳಿಕ ಶ್ರೀಜಯತೀರ್ಥರು [೧]ಯರಗುಲ (ಎಂದರೆ ಯರಗೋಳ) ಗ್ರಾಮಕ್ಕೆ ಹೋಗಿ, ಅಲ್ಲಿರುವ ಪರ್ವತದ ಒಂದು ಗುಹೆಯಲ್ಲಿ ವಾಸಮಾಡಿ, ದಿನಾಲೂ ತೋಯ, ಫಲ, ಪುಷ್ಪಗಳಿಂದ ರಾಮದೇವರನ್ನು ಪೂಜಿಸುತ್ತ, ತಮ್ಮ ಶಿಷ್ಯರು ಮಧುಕರ ವೃತ್ತಿಯಿಂದ ತಂದ ಜೋಳದ ನುಚ್ಚನ್ನು ಸೇವಿಸುತ್ತ ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆಯನ್ನು ಬರೆಯಲಾರಂಭಿಸಿದರು. ಕುಶಾಗ್ರಬುದ್ಧಿಯುಳ್ಳಂಥ ಶ್ರೀಜಯತೀರ್ಥರು, ಶ್ರೀಮದಾಚಾರ್ಯರ ದಶೋಪನಿಷದ್ಭಾಷ್ಯಗಳಲ್ಲಿ ಎರಡೇ ಉಪನಿಷದ್ಭಾಷ್ಯಗಳಿಗೆ ಮಾತ್ರ ಟೀಕೆಯನ್ನು ಬರೆದರು. ಎಂದರೆ ತಮ್ಮ **ಕಾಣ್ವಶಾಖೆಯ** ಈಶಾವಾಸ್ಯೋಪನಿಷತ್ತಿನ ಭಾಷ್ಯಕ್ಕೂ, ಹಾಗೂ **ಪಿಪ್ಪಲಾದ ಶಾಖೆಯ** ಷಟ್ಪ್ರಶ್ನೋಪನಿಷತ್ತಿನ ಭಾಷ್ಯಕ್ಕೂ ಟೀಕೆಯನ್ನು ಬರೆದರು. ಇವೆರಡರಲ್ಲಿ ಈಶಾವಾಸ್ಯೋಪನಿಷದ್ಭಾಷ್ಯಕ್ಕೆ ಟೀಕೆಯನ್ನು ಬರೆಯುವಾಗ್ಗೆ ಮಾತ್ರ ಈ ಉಪನಿಷತ್ತು ಕಾಣ್ವಶಾಖೆಯ ಉಪನಿಷತ್ತೆಂಬುದನ್ನು ಹೀಗೆ ಕಂಠೋಕ್ತವಾಗಿ ಹೇಳಿ, ಸ್ವಶಾಖಾಭಿಮಾನವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ:—

''**ಕಾಣ್ವೀಂ ಮಂತ್ರೋಪನಿಷದಂ** ಯಥಾವದ್ವ್ಯಾಕರಿಷ್ಯನ್ ಭಗವಾನಾಚಾರ್ಯಃ ಚಿಕೀರ್ಷಿತಾ ವಿಘ್ನಪರಿಸಮಾಪ್ತ್ಯಾದಿಪ್ರಯೋಜನೇ ತತ್ಪ್ರತಿಪಾದ್ಯ ದೇವತಾ ಸ್ತುತಿನತೀ ಪ್ರಥಮಂ ನಿಬಧ್ನಾತಿ''

---

೧ ಈ ಯರಗೋಳ ಗ್ರಾಮದ ಬೆಟ್ಟವು, ಹುರಸಗುಂಡಿಗಿ ಗ್ರಾಮದಿಂದ ಪೂರ್ವಕ್ಕೆ ೧೨ ಮೈಲಿನ ಮೇಲೆ ಇದೆ. ಶ್ರೀಜಯತೀರ್ಥರು ಪೂರ್ವಾಶ್ರಮದಲ್ಲಿ ಈ ಬೆಟ್ಟದ ಕಡೆಗೆ ಬೇಟೆಯನ್ನಾಡುವದಕ್ಕೆ ಅನೇಕ ಸಾರೆ ಹೋಗಿರಬೇಕಾದುದರಿಂದಲೇ ಈ ಚಿರಪರಚಿತವಾದ ಬೆಟ್ಟವು, ಗ್ರಂಥರಚನೆಯ ಕಾರ್ಯಕ್ಕೆ ಪ್ರಶಾಂತವಾದ ಸ್ಥಳವಾಗಿದೆಂದು ಗೊತ್ತಿರುವುದರಿಂದ ಗ್ರಂಥಗಳನ್ನು ರಚಿಸುವುದಕ್ಕೆ ಇಲ್ಲಿಗೆ ಬಂದರು.

**ಅರ್ಥ:**—ಕಾಣ್ವಶಾಖೆಯ ಉಪನಿಷತ್ತಾದ ಈಶೋಪನಿಷತ್ತಿನ ಯಥಾರ್ಥವಾದ ಸ್ಪಷ್ಟೀಕರಣ ಮಾಡುವ ಇಚ್ಛೆಯನ್ನು ಧಾರಣ ಮಾಡಿ, ಭಗವಾನ್ ಶ್ರೀಮನ್ಮಧ್ವಾಚಾರ್ಯರು ಇಷ್ಟಫಲದ ಸಿದ್ಧಿಗೋಸ್ಕರವಾಗಿಯೂ ನಿರ್ವಿಘ್ನತೆಯ ಪ್ರಾಪ್ತಿಗೋಸ್ಕರವಾಗಿಯೂ ಈ ಉಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟಂಥ ದೇವತೆಯನ್ನು ಕುರಿತು ಸ್ತುತಿಸಿ ನಮಸ್ಕಾರ ಮಾಡುತ್ತಾರೆ.

ಈ ಪ್ರಕಾರ ಈಶೋಪನಿಷತ್ತಿನ ಶಾಖೆಯನ್ನು ಕಂಠೋಕ್ತವಾಗಿ ಮೊಟ್ಟಮೊದಲು ಹೇಳಿದವರು ಶ್ರೀಜಯತೀರ್ಥರೇ ಸರಿ.

ಆದರೆ ಷಟ್ಪ್ರಶ್ನೋಪನಿಷದ್ಭಾಷ್ಯಕ್ಕೆ ಟೀಕೆಯನ್ನು ಬರೆಯುವಾಗ್ಗೆ, ಶ್ರೀಜಯತೀರ್ಥರು ಆ ಉಪನಿಷತ್ತಿನ ಶಾಖೆಯನ್ನು (ಎಂದರೆ ಷಟ್ಪ್ರಶ್ನೋಪನಿಷತ್ತು ಪಿಪ್ಪಲಾದ ಶಾಖೆಯ ಉಪನಿಷತ್ತೆಂಬುದನ್ನು) ಹೇಳಿರುವುದಿಲ್ಲ; "ಆಥರ್ವಣೀಬ್ರಾಹ್ಮಣೋಪನಿಷತ್ತೆ"ಂದು ಆ ಉಪನಿಷತ್ತಿನ ಕೇವಲ ವೇದವನ್ನು ಮಾತ್ರ ಉಲ್ಲೇಖಿಸಿದ್ದಾರೆ.

ಇದೇ ಮೇರೆಗೆ ಶ್ರೀಮದಾಚಾರ್ಯರ ಗ್ರಂಥಗಳಿಗೆ ಶ್ರೀಜಯತೀರ್ಥರು ಒಟ್ಟು ೧೮ ಟೀಕಾ ಗ್ರಂಥಗಳನ್ನೂ ೪ ಸ್ವತಂತ್ರ ಗ್ರಂಥಗಳನ್ನೂ ಬರೆದಿದ್ದಾರೆ. ಈ ವಿಷಯವನ್ನು ಮುಂದೆ ಸವಿಸ್ತರವಾಗಿ ಹೇಳುವವರಿದ್ದೇವೆ ಇರಲಿ.

ಈ ಪ್ರಕಾರ ಶ್ರೀಜಯತೀರ್ಥರು ೧೨೨೨ನೆಯ ಶಕವರ್ಷದಿಂದ ಪೀಠಾಧಿಪತ್ಯವನ್ನು ಸ್ವೀಕರಿಸಿ, ಗ್ರಂಥಗಳನ್ನು ರಚಿಸುತ್ತ, ೧೨೩೯ನೆಯ ಶಕವರ್ಷದವರೆಗೆ ವೈದಿಕಧರ್ಮದ ಪರಿಪಾಲನೆಯನ್ನು ಮಾಡುತ್ತ ದ್ವೈತಮತ ಸಾಮ್ರಾಜ್ಯವನ್ನು ಆಳುತ್ತಿರಲು, ಶ್ರೀನರಹರಿತೀರ್ಥರು ೧೨೩೬ನೆಯ ಶಕವರ್ಷದಲ್ಲಿ ಈ ಪೀಠಾಧಿಪತ್ಯವನ್ನು ಆಕ್ರಮಿಸುವುದಕ್ಕೋಸ್ಕರ ಆ ಗಂಜಾಮು ದೇಶದಿಂದ (ಎಂದರೆ ಕಲಿಂಗ ದೇಶದಿಂದ) ಕರ್ನಾಟಕಕ್ಕೆ ಬರಲು, ಈ ಪೀಠಾಧಿಪತ್ಯಕ್ಕೋಸ್ಕರ ಶ್ರೀಜಯತೀರ್ಥರಿಗೂ ಶ್ರೀನರಹರಿತೀರ್ಥರಿಗೂ ವಾದವಿವಾದವಾಗಿ ಇವರಿಬ್ಬರಲ್ಲಿ ಮನಸ್ತಾಪವುಂಟಾಯಿತು. ಶ್ರೀನರಹರಿತೀರ್ಥರು ವಯೋವೃದ್ಧರೂ ಶ್ರೀಮದಾನಂದತೀರ್ಥರ ಸಾಕ್ಷಾತ್ ಶಿಷ್ಯರೂ ಆದುದರಿಂದ ಈ ಪೀಠಾಧಿಪತ್ಯವು ಅವರ ವಶಕ್ಕೆನೇ ಹೋಯಿತು.

ಮುಂದೆ ಆ ನರಹರಿತೀರ್ಥರು ನಿರ್ಯಾಣ ಹೊಂದುವ ವರೆಗೆ ಎಂದರೆ ೧೨೨೭ ನೆಯ ಶಕ ವರ್ಷದ ವರೆಗೆ ೧೨ ವರ್ಷಗಳ ತನಕ ಶ್ರೀಜಯತೀರ್ಥರು ಯರ ಗೋಳ ಗ್ರಾಮದ ಗುಹೆಯಲ್ಲಿಯೇ ಕುಳಿತು ಗ್ರಂಥಗಳನ್ನು ರಚಿಸುವುದಕ್ಕೆ ಇವರಿಗೆ ಅವಕಾಶವು ದೊರೆಯಿತು; ಇರಲಿ, ತಾತ್ಪರ್ಯವೇನೆಂದರೆ, ಶ್ರೀನರ ಹರಿತೀರ್ಥರು ಈ ಪೀಠಾಧಿಪತ್ಯವನ್ನು ಶ್ರೀಜಯತೀರ್ಥರ ಕೈಯಿಂದ ಕಸಿದುಕೊಂಡದ್ದಕ್ಕೋಸ್ಕರ ಈ ಜಯತೀರ್ಥರು ಆ ನರಹರಿತೀರ್ಥರ ಮೇಲೆ ಸಿಟ್ಟಾಗುವುದು ಸ್ವಾಭಾವಿಕವಾಗಿದೆ. ಆದುದರಿಂದಲೇ ಶ್ರೀಜಯತೀರ್ಥರು ಶ್ರೀಮದಾಚಾರ್ಯರ **"ಕರ್ಮನಿರ್ಣಯ"** ಎಂಬ ಗ್ರಂಥಕ್ಕೆ ತಾವು ಬರೆದ ಟೀಕೆಯಲ್ಲಿ, ಇದೇ ಗ್ರಂಥಕ್ಕೆ ಶ್ರೀನರಹರಿತೀರ್ಥರು ಬರೆದ ಟೀಕೆಯ ವಾಕ್ಯಗಳನ್ನು ತಿರಸ್ಕರಿಸಿ, ಅವರ ವಿಷಯವಾಗಿ ತಮ್ಮ ಮನಸ್ಸಿನಲ್ಲಿದ್ದ ಕೋಪವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ.

ಶ್ರೀನರಹರಿತೀರ್ಥರು ೧೨೨೭ ನೆಯ ಶಕ ವರ್ಷದ ವಿಶ್ವಾವಸು ಸಂವತ್ಸರದ ಪುಷ್ಯಕೃಷ್ಣ ಸಪ್ತಮಿಯ ದಿವಸ ಹಂಪಾಕ್ಷೇತ್ರದಲ್ಲಿ ತುಂಗಭದ್ರಾ ತೀರದಲ್ಲಿ ಚಕ್ರತೀರ್ಥದ ಬಳಿಯಲ್ಲಿ ವೃಂದಾವನಸ್ಥರಾದರು. ಆ ಬಳಿಕ ಶ್ರೀ ಜಯತೀರ್ಥರು ಪುನಃ ಉತ್ತರಾದಿಪೀಠದ ಮೇಲೆ ಆರೂಢರಾಗಲು, ಮರು ವರ್ಷವೇ ಎಂದರೆ ೧೨೨೮ನೆಯ ಶಕ ವರ್ಷದಲ್ಲಿ (ಎಂದರೆ ಕ್ರಿ. ವ. ೧೩೦೭ ರಲ್ಲಿ) ದಿಲ್ಲಿಯ ಸುಲ್ತಾನ ಖಿಲಜಿ ಅಲ್ಲಾಉದ್ದೀನನ ಸೇನಾಪತಿಯಾದ ಮಲೀಕ ಕಾಫೂರನು ದಕ್ಷಿಣ ಹಿಂದುಸ್ಥಾನದ ಮೇಲೆ ದಂಡೆತ್ತಿ ಬಂದು, ಮೊಟ್ಟ ಮೊದಲು ದೇವಗಿರಿಯ ಯಾದವ ರಾಜ್ಯವನ್ನು ಪಾದಾಕ್ರಾಂತ [1] ಮಾಡಿದನು. ಅಂದಿನಿಂದ ಉತ್ತರ ಕರ್ನಾಟಕದಲ್ಲಿ ರಾಜಕೀಯ ಅಸ್ವಸ್ಥತೆಯುಂಟಾ ಯಿತು. ಆದ್ದರಿಂದ ಶ್ರೀಜಯತೀರ್ಥರು ಪೀಠಾರೋಹಣ ಮಾಡಿದ ಬಳಿಕ

---

೧ ಮುಂದೆ ಈ ಮಲೀಕ ಕಾಫೂರನು ಶ. ವ. ೧೨೩೧ರಲ್ಲಿ (ಕ್ರಿ. ವ. ೧೩೦೯ರಲ್ಲಿ) ಒರಂಗಲ್ಲಿನ ಕಾಕತೀಯ ರಾಜ್ಯಸಿಂಹಾಸನವನ್ನು ಬುಡಮೇಲು ಮಾಡಿ, ಹಾಗೆಯೇ ಮುಂದಕ್ಕೆ ಸಾಗಿ, ಶ. ವ. ೧೨೩೨ರಲ್ಲಿ (ಕ್ರಿ. ವ. ೧೩೧೦ ರಲ್ಲಿ) ಹೊಯ್ಸಳ ಸಾಮ್ರಾಜ್ಯವನ್ನು ನುಂಗಿ ನೀರು ಕುಡಿದನು. ಇಷ್ಟೇ ಅಲ್ಲ ಮುಂದಕ್ಕೆ ರಾಮೇಶ್ವರದ ವರೆಗೆ ಸಾಗಿ ಹೋಗಿ, ದಕ್ಷಿಣ ಹಿಂದುಸ್ತಾನದಲ್ಲಿ ಎಲ್ಲ ಕಡೆಗೂ ಕೊಲೆ ಸುಲಿಗೆಗಳನ್ನು ಮಾಡುತ್ತ, ಮುಸಲ್ಮಾನರ ದರ್ಪವನ್ನು ತೋರಿಸಿದನು. ಇದನ್ನೆಲ್ಲ ನೋಡಿ, ದಕ್ಷಿಣ ಹಿಂದುಸ್ಥಾನದ ಹಿಂದೂ ಜನರೆಲ್ಲರೂ ಹೌಹಾರಿ ಕುಳಿತರು !

ಎಲ್ಲಿಯೂ ಸಂಚಾರ ಮಾಡಲಿಲ್ಲ; ಸದಾಕಾಲವೂ ಯರಗೋಳ ಗುಹೆಯಲ್ಲಿಯೇ ವಾಸಮಾಡಿ, ಗ್ರಂಥರಚನೆಯ ಕಾರ್ಯದಲ್ಲಿಯೇ ತಮ್ಮ ಸರ್ವ ಆಯುಷ್ಯವನ್ನೆಲ್ಲ ಅರ್ಪಿಸಿದರು.

**(ಶ್ರೀಮಜ್ಜಯತೀರ್ಥರು ರಚಿಸಿದ ಗ್ರಂಥಗಳು)**

(೧) ಈಶಾವಾಸ್ಯೋಪನಿಷದ್ಭಾಷ್ಯ ಟೀಕಾ (೨) ಷಟ್ಪ್ರಶ್ನೋಪನಿಷದ್ಭಾಷ್ಯ ಟೀಕಾ (೩) ಬ್ರಹ್ಮಸೂತ್ರ ಭಾಷ್ಯ ಟೀಕಾ (ಎಂದರೆ, ತತ್ತ್ವಪ್ರಕಾಶಿಕಾ) (೪) ಅನುವ್ಯಾಖ್ಯಾನ ಟೀಕಾ (ಎಂದರೆ, ನ್ಯಾಯಸುಧಾ) (೫) ನ್ಯಾಯವಿವರಣ ಪಂಚಿಕಾ (ಟೀಕಾ) (೬) ಪ್ರಮೇಯ ದೀಪಿಕಾ (ಗೀತಾ ಭಾಷ್ಯ ಟೀಕಾ) (೭) ನ್ಯಾಯ ದೀಪಿಕಾ (ಗೀತಾತಾತ್ಪರ್ಯ ನಿರ್ಣಯ ಟೀಕಾ) (೮) ಪ್ರಮಾಣ ಲಕ್ಷಣ ಟೀಕಾ (೯) ಕಥಾ ಲಕ್ಷಣ ಟೀಕಾ (೧೦) ಋಗ್ಭಾಷ್ಯ ಟೀಕಾ (೧೧) ಉಪಾಧಿಖಂಡನ ಟೀಕಾ (೧೨) ಮಾಯಾವಾದ ಖಂಡನ ವಿವರಣ (ಟೀಕಾ) (೧೩) ಪ್ರಪಂಚ ಮಿಥ್ಯಾತ್ವಾನುಮಾನಖಂಡನ ಟೀಕಾ (೧೪) ತತ್ತ್ವ ಸಂಖ್ಯಾನ ವಿವರಣ (ಟೀಕಾ) (೧೫) ತತ್ತ್ವ ವಿವೇಕ ವಿವರಣ (ಟೀಕಾ) (೧೬) ತತ್ತ್ವೋದ್ಯೋತ ವಿವರಣ ಟೀಕಾ (೧೭) ಕರ್ಮನಿರ್ಣಯ ಟೀಕಾ (೧೮) ವಿಷ್ಣುತತ್ತ್ವ ನಿರ್ಣಯ ಟೀಕಾ (**ಸ್ವತಂತ್ರ ಗ್ರಂಥಗಳು**) (೧೯) ಪ್ರಮಾಣ ಪದ್ಧತಿ (೨೦) ವಾದಾವಲಿ (೨೧) ಶತಾಪರಾಧ ಸ್ತೋತ್ರ (೨೨) ಪದ್ಯಮಾಲಾ

ಈ ಗ್ರಂಥಗಳಲ್ಲಿಯ ಶ್ರೀಜಯತೀರ್ಥರ ವಾಣಿಯು ಅತ್ಯಂತ ಸರಸವಾಗಿಯೂ ಮಧುರವಾಗಿಯೂ ಇದೆ. ಹಾಗೆಯೇ ಇವರ ಪ್ರತಿಪಾದನ ಶೈಲಿಯು ಅತಿವಿಶದವಾಗಿಯೂ ಕೋಟಿಕ್ರಮವು ಬಹುಮಾರ್ಮಿಕವಾಗಿಯೂ ಇವೆ. ಇವರ ಗ್ರಂಥಗಳು ವಾಙ್ಮಯ ದೃಷ್ಟಿಯಿಂದಲೂ ಉಜ್ಜ್ವಲವಾಗಿಯೂ ಕಮನೀಯವಾಗಿಯೂ ಇರುತ್ತವೆ. ಸಾರಾಂಶ, ಶ್ರೀಜಯತೀರ್ಥರ ಗ್ರಂಥಗಳಲ್ಲಿ–ಓಜ, ಪ್ರಸಾದ, ಮಾಧುರ್ಯ, ಸೌಕುಮಾರ್ಯ, ಉದಾರತೆ, ಅರ್ಥವ್ಯಕ್ತಿ, ಕಾಂತಿ ಮುಂತಾದ ಅರ್ಥ ಗುಣಗಳು ತುಂಬಿ ತುಳುಕುತ್ತಿವೆ.

ಶ್ರೀಮನ್ಮಧ್ವಾಚಾರ್ಯರು ರಚಿಸಿದ ಗ್ರಂಥಗಳು, ಸೂತ್ರಮಯವಾಗಿಯೂ ಅತ್ಯಂತ ಅಗಾಧವಾಗಿಯೂ ಇರುತ್ತವೆ. ಇಂಥ ಗ್ರಂಥಗಳ

ಅರ್ಥವನ್ನು ವಿಶದ ಮಾಡಿ, ದ್ವೈತಮತದ ರಹಸ್ಯವನ್ನು ವಿಸ್ತಾರಶೀಲವಾದ ವಾಣಿಯಿಂದ ಪ್ರಕಟ ಮಾಡುವಂಥ ಗ್ರಂಥಕಾರರೊಬ್ಬರು ಅವಶ್ಯವಾಗಿ ಬೇಕಾಗಿತ್ತು. ಅತಏವ ಶ್ರೀಜಯತೀರ್ಥರು ಅವತರಿಸಿದರು. ಅರ್ಥಾತ್ ಇವರಿಂದ ದ್ವೈತಸಿದ್ಧಾಂತವು ಜನರಿಗೆ ಚೆನ್ನಾಗಿ ತಿಳಿದು, ಈ ಭೂಮಂಡಲ ದಲ್ಲಿ ಸ್ಥಿರವಾಯಿತು.

ಶ್ರೀಜಯತೀರ್ಥರು ವಿನಯದ ಹಾಗೂ ಶಾಲೀನತೆಯ ಕೇವಲ ಮೂರ್ತಿಯಾಗಿದ್ದರು. ಇವರ ಶಾಲೀನತೆಯನ್ನು ವ್ಯಕ್ತಪಡಿಸುವಂಥ ಒಂದು ಆಖ್ಯಾಯಿಕೆಯನ್ನು ವ್ಯಾಸತೀರ್ಥರು ತಾವು ರಚಿಸಿದ ಜಯತೀರ್ಥ ವಿಜಯ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:—“ಪ್ರವಚನ ಚತುರರಾದ ಶ್ರೀ ಜಯತೀರ್ಥರ ಕೀರ್ತಿಯನ್ನು ಕೇಳಿ, ಸುಪ್ರಸಿದ್ಧ ಘನಪಂಡಿತರಾದ [1]ವಿದ್ಯಾರಣ್ಯರು ಆನೆಯ ಮೇಲೆ ಕುಳಿತುಕೊಂಡು ಸುಮಾರು ೧೨೪೭ ನೆಯ ಶಕ ವರ್ಷದಲ್ಲಿ ಯರಗೋಳ ಗುಹೆಗೆ ಬಂದು, ಶ್ರೀಜಯತೀರ್ಥರಿಗೆ ಬಹುಪ್ರೇಮಪೂರ್ವಕವಾಗಿ ಭೆಟ್ಟಿಯನ್ನು ಕೊಟ್ಟರು. ಶ್ರೀಜಯತೀರ್ಥರೂ ಸಹ ಅತ್ಯಂತ ಪ್ರೇಮದಿಂದಲೂ ನಮ್ರಭಾವದಿಂದಲೂ ಅವರ ಸ್ವಾಗತ ಮಾಡಿದರು. ಹಾಗೂ ಶ್ರೀಮದಾನಂದತೀರ್ಥರ “**ಪ್ರಮಾಣ ಲಕ್ಷಣ**” ಎಂಬ ಗ್ರಂಥವನ್ನು ಅವರ ಕೈಯಲ್ಲಿ ಕೊಟ್ಟು, ಅದರಲ್ಲಿಯ ಒಂದು ವಾಕ್ಯ ವನ್ನು ತೋರಿಸಿ, ‘ಇದರ ಅರ್ಥವನ್ನು ಹೇಳಿರಿ.’ ಎಂದು ಕೇಳಿದರು. ಆಗ ಆ ವಿದ್ಯಾರಣ್ಯಪಂಡಿತರು ಆ ವಾಕ್ಯವನ್ನು ನೋಡಿ, “ಇದೇನು ! ಬಾಲ ವಾಕ್ಯವಾಗಿದೆ. ಇದಕ್ಕೆ ಅರ್ಥ ಹೇಳುವುದು ಹೇಗೆ ?” ಎಂದು ನುಡಿದರು. ಆ ಬಳಿಕ ಶ್ರೀಜಯತೀರ್ಥ ಸ್ವಾಮಿಗಳವರು ಈ ಪ್ರಮಾಣ ಲಕ್ಷಣ ಗ್ರಂಥಕ್ಕೆ ತಾವು ಬರೆದ ಟೀಕೆಯನ್ನು (ಎಂದರೆ ಆ ವಾಕ್ಯಕ್ಕೆ ತಾವು ಬರೆದ ಅರ್ಥವನ್ನು) ಈ ವಿದ್ಯಾರಣ್ಯಪಂಡಿತರಿಗೆ ತೋರಿಸಿದರು. ಸಮಂಜಸವಾದ

---

೧ ಶ್ರೀಶಂಕರಾಚಾರ್ಯರ ಪೂರ್ವಾಶ್ರಮದ ಹೆಸರು ಅವರ ಉತ್ತರಾಶ್ರಮದಲ್ಲಿಯೂ ಹಾಗೆಯೇ ಇದೆ. ಇದೇ ಮೇರೆಗೆ ಶ್ರೀವಿದ್ಯಾರಣ್ಯರಿಗೆ ಪೂರ್ವಾಶ್ರಮದಲ್ಲಿಯೇ ಅವರಿಗೆ ಪಾಂಡಿತ್ಯ ದಿಂದ ಪ್ರಾಪ್ತವಾದ ‘ವಿದ್ಯಾರಣ್ಯ’ ಎಂಬ ಬಿರುದೂ, ‘ಮಾಧವ’ ಎಂಬ ಹೆಸರೂ ಅವರ ಉತ್ತರಾ ಶ್ರಮದಲ್ಲಿಯೂ ಹಾಗೆಯೇ ಇವೆ. ಅರ್ಥಾತ್ ಈ ಸ್ಥಳದಲ್ಲಿ “ವಿದ್ಯಾರಣ್ಯ” ಎಂಬುದು ಇವರ ಪೂರ್ವಾಶ್ರಮದ ಬಿರುದಾಗಿದೆ.

ಆ ಟೀಕೆಯನ್ನು (ಎಂದರೆ ಅರ್ಥವನ್ನು) ನೋಡಿ ಗುಣಗ್ರಾಹಿಗಳಾದ ಈ ವಿದ್ಯಾರಣ್ಯಪಂಡಿತರು ಸಂತೋಷಭರಿತರಾಗಿ, ಶ್ರೀಜಯತೀರ್ಥರನ್ನು ತಮ್ಮ ೧ಆನೆಯ ಮೇಲೆ ಕುಳ್ಳಿರಿಸಿ, ಮಂಗಲವಾದ್ಯಗಳೊಡನೆ ಬ್ರಾಹ್ಮಣ ಸಮುದಾಯದೊಂದಿಗೆ ಅವರನ್ನು ವೈಭವದಿಂದ ಮೆರಸಿದರು.

ಈ ವೃತ್ತಾಂತದಿಂದ ಶ್ರೀಜಯತೀರ್ಥರ ವಿನಯಾತಿಶಯವು ಚೆನ್ನಾಗಿ ವ್ಯಕ್ತವಾಗುತ್ತದೆ. ಇದೇ ಮೇರೆಗೆ ತಮ್ಮ ವಿನಯಾತಿಶಯವನ್ನು ಶ್ರೀಮಜ್ಜಯತೀರ್ಥರು ಸುಧಾದಿಯಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ.

ನಶಬ್ದಾಬ್ಧೌಗಾಢಾ ನಚನಿಗಮಚರ್ಚಾಸು ಚತುರಾ ।
ನಚನ್ಯಾಯೇಪ್ರೌಢಾ ನಚವಿದಿತವೇದ್ಯಾ ಅಪಿವಯಂ ॥
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯ ಸರಣಿಂ ।
ಪ್ರಪನ್ನಾ ಮಾನ್ಯಾಃಸ್ಮಃ ಕಿಮು ಪಿ ಚ ಮದಂತೋಽಪಿ ಮಹತಾಂ ॥೮॥

**ಅರ್ಥ:**—ನಾವು ಶಬ್ದಶಾಸ್ತ್ರದಲ್ಲಿ ನಿಷ್ಣಾತರಲ್ಲ; ವೇದಚರ್ಚೆಯಲ್ಲಿ ಒಳ್ಳೆಯ ಚತುರರಲ್ಲ; ಮತ್ತು ನ್ಯಾಯ ಶಾಸ್ತ್ರದಲ್ಲಿ ಪ್ರೌಢರಲ್ಲ; ಹಾಗೂ ತಿಳಿದದ್ದನ್ನು ತಿಳಿಸುವುದರಲ್ಲಿಯೂ ಸಹ ಸಮರ್ಥರಲ್ಲ. ಹೀಗಿದ್ದರೂ ಶ್ರೀಮತ್ ಪೂರ್ಣಪ್ರಜ್ಞ ಗುರುಗಳ ಕೃಪಾಕಟಾಕ್ಷದಿಂದ (ಎಂದರೆ ಗುರುಗಳ ಕಾರುಣ್ಯಕ್ಕೆ ಪಾತ್ರರಾದದ್ದರಿಂದ) ಏನನ್ನು ನುಡಿದರೂ ಮಹಾತ್ಮರಲ್ಲಿ ಮಾನ್ಯತೆಯನ್ನು ಹೊಂದಿರುವೆವು.

ಶ್ರೀಜಯತೀರ್ಥರು ಗೀತಾತಾತ್ಪರ್ಯ ನಿರ್ಣಯ ಟೀಕೆಯ ಆದಿಯಲ್ಲಿ ಶ್ರೀಮದಾನಂದತೀರ್ಥರನ್ನು ಕುರಿತು ಪರಮಭಕ್ತಿಭಾವದಿಂದ ಹೀಗೆ ಸ್ತುತಿಸಿ ನಮಸ್ಕರಿಸಿದ್ದಾರೆ.

ಧರ್ಮವಿಜ್ಞಾನ ವೈರಾಗ್ಯ ಪರಮೈಶ್ವರ್ಯಶಾಲಿನಃ ।
ಆನಂದತೀರ್ಥ ಭಗವತ್ಪಾದಾನ್ ವಂದೇನಿರಂತರಂ ॥ ೨ ॥

**ಅರ್ಥ:**—ಧರ್ಮ, ವಿಜ್ಞಾನ, ವೈರಾಗ್ಯಗಳೆಂಬ ಶ್ರೇಷ್ಠವಾದ ಐಶ್ವ

---

೧ ಈ ವಿದ್ಯಾರಣ್ಯ ಪಂಡಿತರು ಈ ೧೨೪೭ನೆಯ ಶಕ ವರ್ಷದಲ್ಲಿ ಯಾದವವಂಶದ ಸಂಗಮ ರಾಜನ ರಾಜಪುರೋಹಿತರಾಗಿದ್ದರು. ಆದುದರಿಂದಲೇ ಇವರಿಗೆ ಗಜಾಂತ ಲಕ್ಷ್ಮಿಯು ಪ್ರಾಪ್ತವಾಗಿತ್ತು. ಈ ವಿದ್ಯಾರಣ್ಯಪಂಡಿತರ ಮನೆತನದವರು ಈ ಸಂಗಮರಾಜನ ಮನೆತನಕ್ಕೆ ವಂಶಪರಂಪರಾಗತವಾಗಿ ರಾಜಗುರುಗಳೂ ಎಂದರೆ ಕುಲಗುರುಗಳೂ ಮಂತ್ರಿಗಳೂ ಆಗಿದ್ದರು.

ರ್ಯದಿಂದ ಶೋಭಿಸುವಂಥ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ರನ್ನು ಕುರಿತು ಯಾವಾಗಲೂ ನಮಸ್ಕಾರ ಮಾಡುತ್ತೇನೆ.

ಇದೇ ಮೇರೆಗೆ ಶ್ರೀಪದ್ಮನಾಭತೀರ್ಥ ಗುರಗಳ ವಿಷಯವಾಗಿಯೂ ಸುಧಾದಿಯಲ್ಲಿ ಪರಮಭಕ್ತಿಭಾವವನ್ನು ಹೀಗೆ ವ್ಯಕ್ತಪಡಿಸಿದ್ದಾರೆ:—

ರಮಾನಿವಾಸೋಚಿತ ವಾಸಭೂಮಿಸ್ಸನ್ನ್ಯಾಯ ರತ್ನಾವಲಿ-
ಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿರ್ಭವತಾ-
ದ್ವಿಭೂತ್ಯೈ ॥ ೫ ॥

**ಅರ್ಥ**:—ಲಕ್ಷ್ಮಿಯ ನಿವಾಸಕ್ಕೆ ಉಚಿತವಾದ ವಾಸಭೂಮಿ ಯಾದಂಥ, ಹಾಗೂ ಶ್ರೇಷ್ಠವಾದ ರತ್ನಗಳಿಗೆ ಜನ್ಮಭೂಮಿಯಾದಂಥ (ಸನ್ನ್ಯಾಯ ರತ್ನಾವಲಿ ಗ್ರಂಥಕ್ಕೆ ಜನ್ಮಭೂಮಿಯಾದಂಥ) ಮತ್ತು ವೈರಾಗ್ಯ ಭಾಗ್ಯವುಳ್ಳಂಥ ಪದ್ಮನಾಭತೀರ್ಥಾಮೃತಸಾಗರವು ನನ್ನ ಐಶ್ವ ರ್ಯಕ್ಕೋಸ್ಕರವಾಗಿ ಇರಲಿ. (ಎಂದರೆ ನನ್ನ ಜ್ಞಾನ ವೈಭವಕ್ಕೋಸ್ಕರ ಶ್ರೀಪದ್ಮನಾಭತೀರ್ಥ ಗುರುಗಳ ಸನ್ನ್ಯಾಯ ರತ್ನಾವಲಿ ಗ್ರಂಥವು ನನಗೆ ಸಹಾಯಕವಾಗಿರಲಿ.)

ಇದೇ ಪ್ರಕಾರ ಸುಧಾದಿಯಲ್ಲಿ ಶ್ರೀಅಕ್ಷೋಭ್ಯತೀರ್ಥ ಗುರು ಗಳನ್ನೂ ಹೀಗೆ ಸ್ತುತಿಸಿದ್ದಾರೆ:—

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ಮಮ ॥ ೬ ॥

**ಅರ್ಥ**:—ವ್ಯಾಕರಣ, ನ್ಯಾಯ, ವೇದಾಂತ, ಮೀಮಾಂಸಾದಿ ಸಕಲ ಶಾಸ್ತ್ರಗಳನ್ನು ಬಲ್ಲಂಥ, ಪ್ರತಿವಾದಿಗಳ ಗರ್ವವನ್ನು ನಾಶ ಮಾಡಿದಂಥ ಶ್ರೀಮದಕ್ಷೋಭ್ಯತೀರ್ಥರೆಂಬ ನನ್ನ ಗುರುಗಳನ್ನು ಸೇವಿಸುತ್ತೇನೆ.

ಈ ರೀತಿ ಪರಮಗುರುಭಕ್ತರಾದಂಥ ಮತ್ತು ಸಿಂಹ ಸದೃಶರಾದಂಥ ಶ್ರೀಮಜ್ಜಯತೀರ್ಥರು ತೀರ್ಥಯಾತ್ರೆಗೆ ಹೊರಟು ಆಯಾ ದೇಶ ಗಳಲ್ಲಿದ್ದ ಪ್ರತಿವಾದಿಗಳನ್ನು ಜಯಿಸಿದರು. ಈ ಪ್ರಕಾರ ಎಲ್ಲ ದುರ್ವಾ ದಿಗಳನ್ನು ಜಯಿಸಿ, ಎಲ್ಲರಿಂದ ಜಯಪತ್ರಗಳನ್ನು ಪಡೆದು, ಶ್ರೀಜಯ

ತೀರ್ಥರು, ವೃಂದಾವನಸ್ಥರಾದ ತಮ್ಮ ಗುರುಗಳನ್ನು ಪೂಜಿಸುವುದ ಕ್ಕೋಸ್ಕರ ಮಳಖೇಡ (ಎಂದರೆ ಮಾನ್ಯಖೇಟ) ಕ್ಷೇತ್ರಕ್ಕೆ ಹೋಗಿ, ಅಲ್ಲಿ ಕೆಲವು ದಿವಸಗಳ ವರೆಗೆ ಇದ್ದು, ಆ ಬಳಿಕ ಅಲ್ಲಿಂದ ಕಾಶಿಗೆ ತೆರಳಿದರು. ಆ ವಾರಣಾಸಿ ಕ್ಷೇತ್ರದಲ್ಲಿ ಕೆಲವು ದಿವಸಗಳ ವರೆಗೆ ವಾಸಮಾಡಿ, ತದನಂತರ ಪ್ರಯಾಗ ಕ್ಷೇತ್ರಕ್ಕೆ ಬಂದು, ಅಲ್ಲಿ ತ್ರಿವೇಣಿಯಲ್ಲಿ ಸ್ನಾನ ಮಾಡಿ, ಸಕಲ ವಿಷಯಗಳನ್ನು ತ್ಯಾಗಮಾಡಿದಂಥ ಒಬ್ಬ ಶಿಷ್ಯೋತ್ತಮನಿಗೆ ಸನ್ಯಾಸಾ ಶ್ರಮವನ್ನು ಕೊಟ್ಟು, ಈ ಶಿಷ್ಯನಿಗೆ "**ವಿದ್ಯಾಧಿರಾಜ ತೀರ್ಥ**" ಎಂಬ ಹೆಸರನ್ನಿಟ್ಟರು. ಮತ್ತು ಈ ಶಿಷ್ಯನು ಪ್ರವಚನಪಟುವೂ, ವಾದಿಗಳನ್ನು ಜಯಿಸುವವನೂ ದಿಗ್ವಿಜಯ ಪಂಡಿತನೂ ಆಗಲೆಂದು ಪರಮಗುಣನಿಧಿ ಗಳಾದ ಶ್ರೀಜಯತೀರ್ಥರು ಶ್ರೀರಾಮನನ್ನು ಪ್ರಾರ್ಥಿಸಿದರು.

ಈ ಕಾರ್ಯವು ನೆರವೇರಿದ ಬಳಿಕ ಪ್ರಯಾಗದಿಂದ ಮಳಖೇಡಕ್ಕೆ ಬಂದು, ಮುಂದೆ ೧೨೫೦ ನೆಯ ಶಕ ವರ್ಷದ ವಿಭವ ಸಂವತ್ಸರದ ಆಷಾಢ ಕೃಷ್ಣಪಂಚಮಿಯ ದಿವಸ ಈ ಮಾನ್ಯಖೇಟ ಕ್ಷೇತ್ರದಲ್ಲಿಯೇ ಕಾಗಿಣೀ ನದಿಯ ತೀರದಲ್ಲಿ ವೃಂದಾವನಸ್ಥರಾದರು.

---

# ೧೫ನೆಯ ಅಧ್ಯಾಯ

## ಉಪಸಂಹಾರ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಚರಿತ್ರೆಯನ್ನೂ ಶ್ರೀಮಜ್ಜಯತೀರ್ಥ ಭಗವತ್ಪಾದಾಚಾರ್ಯರ ಚರಿತ್ರೆಯನ್ನೂ ಸಾದ್ಯಂತವಾಗಿ ನಿರೀಕ್ಷಿಸಿದರೆ, ದ್ವೈತಮತದ ಪುನರುಜ್ಜೀವನದ ಇತಿಹಾಸದಲ್ಲಿ, ತಮ್ಮ ಅಗಾಧವಾದ ಪಾಂಡಿತ್ಯದಿಂದಲೂ, ಉಜ್ಜ್ವಲವಾದ ತ್ಯಾಗದಿಂದಲೂ ಧರ್ಮಸಂಸ್ಥಾಪನೆಯ ಕಾರ್ಯಕ್ಕೋಸ್ಕರ ಈ ಉಭಯ ಧರ್ಮವೀರರು ತಮ್ಮ ಜೀವನ ಸರ್ವಸ್ವವನ್ನು ಸಮರ್ಪಿಸಿದ್ದಾರೆಂಬುದು ಧಾರಾಳವಾಗಿ ವ್ಯಕ್ತವಾಗುತ್ತದೆ. ಇವರಿಬ್ಬರು ಮಹಾಭಾಗರು ದ್ವೈತಮತ ಸಾಮ್ರಾಜ್ಯದಲ್ಲಿ ವಿಖ್ಯಾತ ಚಕ್ರವರ್ತಿಗಳಾಗಿದ್ದಾರೆ. ಈ ಉಭಯ ಸ್ಥಿತಪ್ರಜ್ಞರು ನಿರೂಪಿಸಿದ ದ್ವೈತಸಿದ್ಧಾಂತವನ್ನೇ ಮುಂದಿನ ಎಲ್ಲ ದ್ವೈತಮತ ಗ್ರಂಥಕಾರರು ಅನುವಾದ ಮಾಡಿದ್ದಾರೆ. ಬೌದ್ಧಧರ್ಮದ ಗಂಡಾಂತರದಿಂದ ಮುಕ್ತಮಾಡಿ, ವೈದಿಕಧರ್ಮದ ಪುನರುಜ್ಜೀವನವನ್ನು ಮಾಡಿದ ಮೊಟ್ಟಮೊದಲಿನ ಧರ್ಮವೀರರೂ, ಶೃಂಗೇರಿಮಠದ ಆದ್ಯ ಜಗದ್ಗುರುಗಳೂ ಆದ ಶ್ರೀಮತ್ ಸುರೇಶ್ವರಾಚಾರ್ಯರು ಹೇಗೆ ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಅವತರಿಸಿದ್ದಾರೆಯೋ, ಹಾಗೆಯೇ ದ್ವೈತಮತದ ಪುನರುಜ್ಜೀವನವನ್ನು ಮಾಡಿದ ಮೊಟ್ಟಮೊದಲಿನ ಧರ್ಮವೀರರಾದ ಶ್ರೀಮದಾನಂದತೀರ್ಥರೂ ಶ್ರೀಮಜ್ಜಯತೀರ್ಥರೂ ಕಾಣ್ವಶಾಖೆಯ ಬ್ರಾಹ್ಮಣರಲ್ಲಿಯೇ ಅವತರಿಸಿದ್ದಾರೆ. ಅರ್ಥಾತ್ ಈ ಇತಿಹಾಸ ಕಾಲದಲ್ಲಿ ಧರ್ಮಗ್ಲಾನಿಯನ್ನು ಹೋಗಲಾಡಿಸಿ, ವೈದಿಕಧರ್ಮ ಸಂಸ್ಥಾಪನೆಯ ಕಾರ್ಯವನ್ನು ನೆರವೇರಿಸಿದ ಧರ್ಮವೀರರಲ್ಲಿ ಕಾಣ್ವಶಾಖೆಯ ಬ್ರಾಹ್ಮಣರು **ಪ್ರಥಮ**ಸ್ಥಾನವನ್ನು ಪಡೆದಿದ್ದಾರೆ.

ಶ್ರೀಮದಾನಂದತೀರ್ಥರು ಸ್ಥಾಪಿಸಿದ ಪರಮಪವಿತ್ರವಾದ ಜಗದ್ಗುರು ಮಠವೆಂದರೆ **"ಉತ್ತರಾದಿಮಠ"ವೇ** ಸರಿ. ದ್ವೈತಮತದ ಮಠ

ಗಳಲ್ಲಿ ಉತ್ತರಾದಿಮಠವೇ ಮುಖ್ಯಮಠವು. ಉತ್ತರಾದಿ ಮಠದ ಸಂಸ್ಥಾಪಕರಾದ ಶ್ರೀಮದಾನಂದತೀರ್ಥರೇ ಕಾಣ್ವಶಾಖೆಯ ಬ್ರಾಹ್ಮಣರಾದುದರಿಂದ ಕಾಣ್ವಶಾಖೆಯ ಮಾಧ್ವರಿಗೆ ಉತ್ತರಾದಿ ಮಠವೇ ಮೂಲ ಮಠವೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿದೆ. ಇಷ್ಟೇ ಅಲ್ಲ, ಶ್ರೀಮಜ್ಜಯತೀರ್ಥರ ನಿರ್ಯಾಣಕಾಲದ ವರೆಗೆ ಉತ್ತರಾದಿ ಮಠದಲ್ಲಿ ಕಾಣ್ವಶಾಖೆಯ ಬ್ರಾಹ್ಮಣರ ಪ್ರಾಬಲ್ಯವಿರುವುದು ಸ್ವಾಭಾವಿಕವಾಗಿದೆ. ಇದೇ ಮೇರೆಗೆ ಮುಂದೆ ಶ್ರೀಮದ್ವಿದ್ಯಾಧಿರಾಜತೀರ್ಥರ ಕಾಲದಿಂದ ಉತ್ತರಾದಿ ಮಠದ ಪೀಠವನ್ನು ಶಾಕಲಶಾಖೆಯ ಬ್ರಾಹ್ಮಣರು ಆರೋಹಣ ಮಾಡಲಾರಂಭಿಸಿದ್ದರಿಂದ ಈ ಮಠದಲ್ಲಿ ಶಾಕಲಶಾಖೆಯ ಬ್ರಾಹ್ಮಣರ ಪ್ರಾಬಲ್ಯವುಂಟಾಗುವುದು ನೈಸರ್ಗಿಕವಾಗಿದೆ. ಅಂದಿನಿಂದ ಇಂದಿನ ವರೆಗೆ ಶಾಕಲಶಾಖೆಯ ಬ್ರಾಹ್ಮಣರೇ ಉತ್ತರಾದಿ ಮಠದ ಪೀಠವನ್ನು ಆರೋಹಣ ಮಾಡುತ್ತಿದ್ದಾರೆ. ಶ್ರೀಮದ್ರಾಮಚಂದ್ರತೀರ್ಥರ ಕಾಲದಲ್ಲಿ ಇವರಿಗೆ ವಿಬುಧೇಂದ್ರರು, ವಿದ್ಯಾನಿಧಿಗಳು ಎಂಬ ಇಬ್ಬರು ಶಿಷ್ಯರಾಗಿ, ಶ್ರೀರಾಮಚಂದ್ರತೀರ್ಥರು ನಿರ್ಯಾಣ ಹೊಂದಿದ ಬಳಿಕ ಶ್ರೀವಿದ್ಯಾನಿಧಿ ತೀರ್ಥರು ಉತ್ತರಾದಿ ಮಠದ ಪೀಠವನ್ನು ಆರೋಹಣಮಾಡಿದ್ದರಿಂದ ಶ್ರೀವಿಬುಧೇಂದ್ರತೀರ್ಥರು ಮತ್ತೊಂದು ಸ್ವತಂತ್ರವಾದ ಮಠವನ್ನು ಏರ್ಪಡಿಸಿದರು. ಆಗ ಈ ನೂತನವಾದ **ವಿಬುಧೇಂದ್ರರ ಮಠ**ದ ಕಡೆಗೆ, ಉತ್ತರಾದಿಮಠದ ಶಿಷ್ಯರಾದ ಕಾಣ್ವಶಾಖೆಯ ಬ್ರಾಹ್ಮಣರೂ, ಶಾಕಲ ಶಾಖೆಯ ಬ್ರಾಹ್ಮಣರೂ, ತೈತ್ತಿರೀಯ ಶಾಖೆಯ ಬ್ರಾಹ್ಮಣರೂ ಎಷ್ಟೋ ಜನರು ಬಂದು ಸೇರಿದರು. ಅರ್ಥಾತ್ ಈ ವಿಬುಧೇಂದ್ರರ ಮಠದ ಶಿಷ್ಯರಾದರು. ಈ ಮಠದ ೭ನೆಯ ಶ್ರೀಪಾದಂಗಳವರಾದ **ಶ್ರೀರಾಘವೇಂದ್ರಸ್ವಾಮಿಗಳ**ವರು ಮಹಾ ತಪಸ್ವಿಗಳಾದುದರಿಂದ ಇವರ ಕಾಲದಿಂದ ಈ **"ವಿಬುಧೇಂದ್ರರ ಮಠ"**ವನ್ನು, **"ರಾಘವೇಂದ್ರಸ್ವಾಮಿಗಳ ಮಠ"** ಎಂದೂ ಜನರು ಸಂಬೋಧಿಸಲಾರಂಭಿಸಿದರು. ಶ್ರೀರಾಘವೇಂದ್ರ ಸ್ವಾಮಿಗಳವರು [೧] **ಅರುವತ್ತೊಕ್ಕಲು** ಬ್ರಾಹ್ಮಣರಾದುದರಿಂದ ಇವರ ಕಾಲದಿಂದ

---

೧. ಈ ಅರುವತ್ತೊಕ್ಕಲು ಬ್ರಾಹ್ಮಣರಲ್ಲಿ ಮೂಲತಃ ಅರುವತ್ತೇ ಮನೆತನಗಳ ಹೆಸರುಗಳೂ ಹದಿನಾಲ್ಕೇ ಗೋತ್ರಗಳೂ ಇವೆ. ಇವರಲ್ಲಿ ಮೂಲತಃ ಅರುವತ್ತೇ ಮನೆತನಗಳಾದುದರಿಂದ ಇವರಿಗೆ "ಅರುವತ್ತೊಕ್ಕಲು ಬ್ರಾಹ್ಮಣರು" ಎಂಬ ಹೆಸರು ಪ್ರಾಪ್ತವಾಗಿದೆ.

ಇಂದಿನವರೆಗೆ ಅರುವತ್ತೊಕ್ಕಲು ಬ್ರಾಹ್ಮಣರೇ ಈ ಮಠದ ಪೀಠವನ್ನು ಆರೋಹಣ ಮಾಡುತ್ತಿದ್ದಾರೆ. ಈ ಮಠವು, ಮೈಸೂರು ಸಂಸ್ಥಾನದಲ್ಲಿ 'ನಂಜನಗೂಡ' ಎಂಬ ಗ್ರಾಮದಲ್ಲಿದೆ.

ಕಾಣ್ವಶಾಖೆಯ ಮಾಧ್ವಬ್ರಾಹ್ಮಣರಲ್ಲಿ ತೇಜಸ್ವಿಗಳಾದ ಶ್ರೀಮಾಧವ ತೀರ್ಥರೆಂಬುವರು ೧೭೧೮ನೆಯ ಶಕವರ್ಷದ ನಳ ಸಂವತ್ಸರದ ಮಾಘಶುದ್ಧ ಪಂಚಮಿಯ ದಿವಸ ಉಡುಪಿಯ ಶಿರೂರ ಮಠದ ೨೩ನೆಯ ಶ್ರೀಪಾದಂಗಳವರಾದ ಶ್ರೀಲಕ್ಷ್ಮೀ ಮನೋಹರ ತೀರ್ಥರವರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದುದಲ್ಲದೆ **"ಕಣ್ವಮಠ"** ಎಂಬ ಕಾಣ್ವಶಾಖೆಯ ಮಾಧ್ವಮಠವನ್ನೂ ಸ್ಥಾಪಿಸಿದರು. ಅಂದಿನಿಂದ ಕಾಣ್ವಶಾಖೆಯ ಮಾಧ್ವರೆಲ್ಲರೂ ಶ್ರೀವಿಬುಧೇಂದ್ರರ ಮಠದ ಶಿಷ್ಯತ್ವವನ್ನು ಬಿಟ್ಟು, ಆತ್ಮೀಯ ಭಾವನೆಯಿಂದ ಈ ನೂತನವಾದ **ಕಣ್ವಮಠ**ದ ಶಿಷ್ಯರಾದರು. ಈ ಕಣ್ವಮಠವು ಈಗಿನ ಕಲಬುರ್ಗಿ ಜಿಲ್ಹೆಯಲ್ಲಿ ಸುರಪುರ ತಾಲೂಕಿನಲ್ಲಿ ಹುಣಸೆಹೊಳೆ ಗ್ರಾಮದಲ್ಲಿದೆ. ಈ ಊರು ಈ ಕಣ್ವಮಠಕ್ಕೆ ಇನಾಮುಗ್ರಾಮವಾಗಿದೆ. ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ:—

| | |
|---|---|
| ಕಾಣ್ವಶಾಖೆಯ ಮಾಧ್ವರು | ಶಕವರ್ಷದ ೧೧೩೨ರಿಂದ ೧೪೪೮ರ ವರೆಗೆ ೧೬೬ ವರ್ಷಗಳ ತನಕ ಉತ್ತರಾದಿ ಮಠದ ಶಿಷ್ಯರಾಗಿದ್ದರು. |
| ,, ,, | ,, ೧೪೪೮ರಿಂದ ೧೭೧೮ರ ವರೆಗೆ ೨೭೦ ವರ್ಷಗಳ ತನಕ ಶ್ರೀವಿಬುಧೇಂದ್ರರ ಮಠದ ಶಿಷ್ಯರಾಗಿದ್ದರು. |
| ,, ,, | ,, ೧೭೧೮ರಿಂದ ೧೮೫೮ರ ವರೆಗೆ ೧೪೦ ವರ್ಷಗಳ ತನಕ ಕಣ್ವಮಠದ ಶಿಷ್ಯರಾಗಿದ್ದಾರೆ. |

ಕೋಲಾರ ಜಿಲ್ಹೆಯ ಮುಳಬಾಗಿಲ ಗ್ರಾಮದಲ್ಲಿರುವ ಶ್ರೀಪಾದರಾಯರ ಮಠದಲ್ಲಿಯೂ ಅರುವತ್ತೊಕ್ಕಲು ಬ್ರಾಹ್ಮಣರೇ ಪೀಠಾರೋಹಣವನ್ನು ಮಾಡುತ್ತಿದ್ದಾರೆ.

ಮೈಸೂರು ಜಿಲ್ಲೆಯ ಸೊಸಲೆ ಗ್ರಾಮದಲ್ಲಿರುವ ಶ್ರೀವ್ಯಾಸರಾಯರ ಮಠದಲ್ಲಿಯೂ ಮೊದಲು ಮೊದಲು ಅರುವತ್ತೊಕ್ಕಲು ಬ್ರಾಹ್ಮಣರೇ ಪೀಠಾರೋಹಣವನ್ನು ಮಾಡುತ್ತಿದ್ದರು. ಇತ್ತೀಚೆಗೆ ಈ ಮಠದಲ್ಲಿಯೂ ಕುಂದಾಪುರ ಮಠದಲ್ಲಿಯೂ [1]**ಆರುವೇಲು** ಬ್ರಾಹ್ಮಣರು ಪೀಠಾರೋಹಣವನ್ನು ಮಾಡುತ್ತಿದ್ದಾರೆ.

ಇವಲ್ಲದೆ ಮಜ್ಜಿಗೆಹಳ್ಳಿಮಠ, ಕೂಡಲಗಿಮಠ ಇವೆರಡು ಚಿಕ್ಕಮಠಗಳಾಗಿವೆ. ಭೀಮನಕಟ್ಟೆ ಮಠವೂ, ಭಂಡಾರಿಕೇರಿ ಮಠವೂ ಶ್ರೀಮದಾನಂದ ತೀರ್ಥರ ಗುರುಗಳಾದ ಶ್ರೀಅಚ್ಯುತ ಪ್ರೇಕ್ಷಾಚಾರ್ಯರ ಮಠಗಳಾಗಿವೆ. ಸುಬ್ರಹ್ಮಣ್ಯಮಠವೂ ಕಾಣಿಯೂರಮಠವೂ ಶ್ರೀಮದಾನಂದ ತೀರ್ಥರ ಅನುಜರಾದ ಶ್ರೀವಿಷ್ಣುತೀರ್ಥಾಚಾರ್ಯರ ಮಠಗಳಾಗಿವೆ. ಈ ನಾಲ್ಕು ಮಠಗಳಲ್ಲಿ ಈಚೆಗೆ ಶಿವಳ್ಳಿ ಬ್ರಾಹ್ಮಣರು ಪೀಠಾರೋಹಣವನ್ನು ಮಾಡುತ್ತಿದ್ದಾರೆ.

---

೧ ಆರುವೇಲು ಎಂದರೆ ಆರುಸಾವಿರ; ಆರುಸಾವಿರ ನಿಯೋಗಿಗಳು (ಎಂದರೆ ಶಾನಭೋಗರು) ಇದ್ದಂಥ ಆಂಧ್ರಬ್ರಾಹ್ಮಣ ಸಮಾಜಕ್ಕೆ ಆರುವೇಲು ಬ್ರಾಹ್ಮಣರೆಂದು ಹೆಸರು. ಕರ್ನಾಟಕ ದೇಶದ ಬ್ರಾಹ್ಮಣರಲ್ಲಿ ವೈದಿಕರು, ಗೃಹಸ್ಥರು ಎಂದು ಎರಡು ವರ್ಗಗಳಿದ್ದಂತೆ, ಆಂಧ್ರದೇಶದ ಬ್ರಾಹ್ಮಣರಲ್ಲಿ ವೈದಿಕರು, ನಿಯೋಗಿಗಳು ಎಂದು ಎರಡು ವರ್ಗಗಳುಂಟು. ಆತಏವ ನಿಯೋಗಿಗಳೆಂದರೆ ಗೃಹಸ್ಥರೆಂದು ಇತ್ಯರ್ಥ. ಅರ್ಥಾತ್ ಆರುವೇಲು ಬ್ರಾಹ್ಮಣರಲ್ಲಿ ಎಲ್ಲರೂ ಗೃಹಸ್ಥರೇ (ಎಂದರೆ ನಿಯೋಗಿಗಳೇ) ಹೊರತು ಇವರಲ್ಲಿ ವೈದಿಕವೃತ್ತಿಯಿಂದ ಜೀವನ ಮಾಡುವ ಪುರೋಹಿತರ ವರ್ಗವೇ ಇಲ್ಲ. ಈ ಆರುವೇಲು ಬ್ರಾಹ್ಮಣರ ಪುರೋಹಿತರು, ಮುಲುಕು ನಾಡಿನ ವೈದಿಕ ಬ್ರಾಹ್ಮಣರೇ ಸರಿ.

## ೧ನೆಯ ಪರಿಶಿಷ್ಟ

### ಶ್ರೀಮನ್ಮಧ್ವಾಚಾರ್ಯರ ಮತ್ತು ಅವರ ಸಾಕ್ಷಾತ್ ಶಿಷ್ಯರ ಕಾಲನಿರ್ಣಯ

(೧) ಶ್ರೀಮನ್ಮಧ್ವಾಚಾರ್ಯರು ತಾವು ಬರೆದ "ಮಹಾಭಾರತ ತಾತ್ಪರ್ಯ ನಿರ್ಣಯ" ಎಂಬ ಗ್ರಂಥದಲ್ಲಿ ತಮ್ಮ ಜನ್ಮಕಾಲವನ್ನು ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ:—

ಚತುಸ್ಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ । ಜಾತಃ ಪುನರ್ವಿಪ್ರತನುಃ ಸಭೀಮೋ ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥ ೩೨-೧೩೧ ॥

ಅರ್ಥ:— ಕಲಿಯುಗದಲ್ಲಿ ೪೩೦೦ ಸಂವತ್ಸರಗಳು ಗತಿಸುತ್ತಿರಲು, ಪೃಥ್ವಿಯಲ್ಲಿ ಆ ಭೀಮನು ಪುನಃ ಬ್ರಾಹ್ಮಣ ವಂಶದಲ್ಲಿ ಹುಟ್ಟಿ, ದೈತ್ಯರಿಂದ ಅಡಗಿಸಲ್ಪಟ್ಟಂಥ ಹರಿತತ್ತ್ವವನ್ನು ಹೇಳಿದನು.

ಶ್ರೀಮನ್ಮಧ್ವಾಚಾರ್ಯರು ಗತಕಲಿ ಪ್ರಮಾಣ ೪೩೦೦ರಲ್ಲಿ ಎಂದರೆ ೧೧೨೧ನೆಯ ಶಕವರ್ಷದ ಸಿದ್ಧಾರ್ಥಿ ಸಂವತ್ಸರದಲ್ಲಿ (ಅರ್ಥಾತ್ ೧೧೯೯ ನೆಯ ಕ್ರಿಸ್ತ ವರ್ಷದಲ್ಲಿ) ಅವತರಿಸಿದರೆಂಬುದು ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಈ ಕಾಲವನ್ನು ಸ್ವತಃ ಶ್ರೀಮನ್ಮಧ್ವಾಚಾರ್ಯರೇ ಹೇಳಿದ್ದರಿಂದ ಇದು, ಅತ್ಯಂತ ಬಲವತ್ತರವಾದ ಪ್ರಮಾಣವಾಗಿರುತ್ತದೆ.

ಈ ಪ್ರಮಾಣದಿಂದ "ಮಠೀಯ ಗುರುಪರಂಪರಾ ಪೀಳಿಗೆ"ಯ ಮೇಲೆ ಸ್ವಚ್ಛವಾದ ಪ್ರಕಾಶವು ಬಿದ್ದು, ಆ ಪೀಳಿಗೆಯಲ್ಲಿ ಮೊದಲನೆಯ ಜಗದ್ಗುರುಗಳಾದ ಶ್ರೀಮದಾನಂದತೀರ್ಥರಿಂದ ಆರಂಭ ಮಾಡಿಕೊಂಡು, ಶ್ರೀಮಜ್ಜಯತೀರ್ಥರ ವರೆಗೆ ಆರು ಜನ ಜಗದ್ಗುರುಗಳ ನಿರ್ಯಾಣಕಾಲದ

ಶಕವರ್ಷಗಳು ತಪ್ಪಿರುತ್ತವೆಂಬುದು ಸ್ಪಷ್ಟವಾಗಿ ಒಡೆದು ಕಾಣುತ್ತದೆ. ಅದು ಹೇಗೆಂದರೆ,

ಮೊದಲನೆಯ ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರ ನಿರ್ಯಾಣಕಾಲದ ಶಕವರ್ಷವನ್ನೇ ಮೊದಲು ತೆಗೆದುಕೊಳ್ಳುವಾ, ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ ಶ್ರೀಮನ್ಮಧ್ವಾಚಾರ್ಯರು ೧೧೧೯ನೆಯ ಶಕವರ್ಷದ ಪಿಂಗಳ ಸಂವತ್ಸರದಲ್ಲಿ ಅದೃಶ್ಯರಾದರೆಂದು ಹೇಳಿದೆ. ಆದರೆ ಸ್ವತಃ ಈ ಶ್ರೀಮದಾಚಾರ್ಯರೇ ೧೧೬೦ನೆಯ ಶಕವರ್ಷದಲ್ಲಿ ತಾವು ಹುಟ್ಟಿದ್ದೇವೆಂದು ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಇತ್ಯರ್ಥವೇನೆಂದರೆ, ಶ್ರೀಮನ್ಮಧ್ವಾಚಾರ್ಯರು ೧೧೧೯ನೆಯ ಶಕವರ್ಷದಲ್ಲಿ ಪೃಥ್ವಿಯ ಮೇಲೆ ಇನ್ನೂ ಅವತರಿಸಿಯೇ ಇರಲಿಲ್ಲ. ಹೀಗಿದ್ದುದರಿಂದ ಹುಟ್ಟುವುದಕ್ಕಿಂತ ಮೊದಲೇ ಇವರು ಅದೃಶ್ಯರಾದರೆಂದು ಹೇಳುವುದು-ಅಸಂಬದ್ಧ ಪ್ರಲಾಪವೇ ಸರಿ. ಆತಏವ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ, ಶ್ರೀಮನ್ಮಧ್ವಾಚಾರ್ಯರು ಅದೃಶ್ಯರಾದದ್ದು ೧೧೧೯ನೆಯ ಶಕವರ್ಷದಲ್ಲಿ ಎಂದು ಹೇಳಿರುವುದು ಸರ್ವಥೈವ-ಅಸಾಧುವಾಗಿರುತ್ತದೆಂಬುದು ಸಿದ್ಧ.

ಆದರೆ ಶ್ರೀಮನ್ಮಧ್ವಾಚಾರ್ಯರ ನಿರ್ಯಾಣಕಾಲದ ಸಂವತ್ಸರವು ಮಾತ್ರ ಪಿಂಗಳವೆಂಬುದು ಸತ್ಯವಾಗಿದೆ. ಇವರದು ಒಬ್ಬರದೇ ಮಾತ್ರವಲ್ಲ; ಈ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿರುವ ಸಕಲ ಜಗದ್ಗುರುಗಳ ನಿರ್ಯಾಣ ಕಾಲದ ಸಂವತ್ಸರಗಳೆಲ್ಲವೂ ಸತ್ಯವಾಗಿರುತ್ತವೆ. ಈ ವಿಷಯದಲ್ಲಿ ಯಾರದೂ ಮತಭೇದವಿಲ್ಲ. ಇದೇ ಮೇರೆಗೆ ಈ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿರುವ ಸಕಲ ಜಗದ್ಗುರುಗಳ ನಿರ್ಯಾಣ ಕಾಲದ ಮಾಸ, ಪಕ್ಷ, ತಿಥಿಗಳೂ ಸತ್ಯವಾಗಿರುತ್ತವೆ. ಏಕೆಂದರೆ, ಸದ್ವೈಷ್ಣವರೆಲ್ಲರೂ ಪ್ರತಿವರ್ಷ ಎಲ್ಲ ಜಗದ್ಗುರುಗಳ ಪುಣ್ಯತಿಥಿಗಳನ್ನು ಪಾಲಿಸುತ್ತಿರುವುದರಿಂದ ಈ ಪ್ರತಿಯೊಬ್ಬ ಜಗದ್ಗುರುವಿನ ಪುಣ್ಯತಿಥಿಯ ಮಾಸ, ಪಕ್ಷ, ತಿಥಿಗಳು ಎಲ್ಲ ಸದ್ವೈಷ್ಣವರ ಹೃದಯದಲ್ಲಿ ಸ್ಥಿರವಾಗಿ ವಾಸ ಮಾಡಿರುತ್ತವೆ. ಇರಲಿ.

ಶ್ರೀಮದಾನಂದತೀರ್ಥರು, ಹುಟ್ಟುವುದಕ್ಕಿಂತ ಮೊದಲೇ ಎರಡು ವರ್ಷಗಳ ಹಿಂದೆ ನಿರ್ಯಾಣ ಹೊಂದಿದರೆಂದು ಬರೆದ ಗೃಹಸ್ಥನು, ಎಂದರೆ

ಮೊದಲಿನ ಜಗದ್ಗುರುಗಳ ನಿರ್ಯಾಣಕಾಲದ ವಿಷಯದಲ್ಲಿ ಬಹಳೇ ಅಪರಿಚಿತನಾದ ಲೇಖಕನು, ಮೊದಲಿನ ಈ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಹೀಗೆ ಬರೆದಿದ್ದಾನೆ:—

| ಜಗದ್ಗುರುಗಳು | ಮಠೀಯ ಗುರುಪರಂಪರಾ ಪೀಠಿಗೆಯಲ್ಲಿ ಹೇಳಿರುವ ನಿರ್ಯಾಣಕಾಲದ ಸಂವತ್ಸರಗಳು | ಮಠೀಯ ಗುರುಪರಂಪರಾ ಪೀಠಿಗೆಯಲ್ಲಿ ಹೇಳಿರುವ ನಿರ್ಯಾಣಕಾಲದ ಶಕವರ್ಷಗಳು |
|---|---|---|
| ೧ನೆಯ ಜಗದ್ಗುರು | ಪಿಂಗಳ | ೧೧೧೯ |
| ೨ನೆಯ ,, | ರಕ್ತಾಕ್ಷಿ | ೧೧೨೬ |
| ೩ನೆಯ ,, | ಶ್ರೀಮುಖ | ೧೧೩೫ |
| ೪ನೆಯ ,, | ವಿಕೃತಿ | ೧೧೫೨ |
| ೫ನೆಯ ,, | ವಿಶ್ವಾವಸು | ೧೧೬೭ |
| ೬ನೆಯ ,, | ಪ್ರಭವ | ೧೧೯೦ |
| ೭ನೆಯ ,, | ಅಂಗಿರಾ | ೧೨೫೪ |

ಈ ಮೊದಲಿನ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳ ವಿಷಯದಲ್ಲಿ ಈ ಲೇಖಕನು ತೀರ ಅಪರಿಚಿತ ಮನುಷ್ಯನಾದುದರಿಂದ ಈತನು ಈ ಜಗದ್ಗುರುಗಳ ನಿರ್ಯಾಣ ಕಾಲದ ಶಕವರ್ಷಗಳನ್ನು, ಕೇವಲ ಇವರ ನಿರ್ಯಾಣಕಾಲದ ಸಂವತ್ಸರಗಳನ್ನು ಆಧಾರವಾಗಿಟ್ಟುಕೊಂಡು ಬರೆಯಬೇಕಾಗಿದೆಯೇ ಹೊರತು ಇವನಿಗೆ ಅನ್ಯಮಾರ್ಗವೇ ಇಲ್ಲ. ಆದುದರಿಂದಲೇ ಈತನು ೧ನೆಯ ಜಗದ್ಗುರುಗಳ ನಿರ್ಯಾಣಕಾಲದ ಪಿಂಗಳ ಸಂವತ್ಸರದಿಂದ, ೨ನೆಯ ಜಗದ್ಗುರುಗಳ ನಿರ್ಯಾಣಕಾಲದ ರಕ್ತಾಕ್ಷಿ ಸಂವತ್ಸರದ ವರೆಗೆ ಎಣಿಸಿ, ಆ ೭ ವರ್ಷಗಳನ್ನು ೧ನೆಯ ಜಗದ್ಗುರುಗಳ

ನಿರ್ಯಾಣಕಾಲದ ೧೧೧೯ನೆಯ ಶಕವರ್ಷದಲ್ಲಿ ಸೇರಿಸಿ, ೧೧೪೭ನೆಯ ಶಕವರ್ಷವು ೨ನೆಯ ಜಗದ್ಗುರುಗಳ ನಿರ್ಯಾಣಕಾಲವೆಂದು ಬರೆದಿದ್ದಾನೆ. ಇದೇ ಪದ್ಧತಿಯಿಂದ ೩ನೆಯ, ೪ನೆಯ, ೫ನೆಯ, ೬ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆದಿದ್ದಾನೆ. ಇಲ್ಲಿ ಮೂಲತಃ ೧ನೆಯ ಜಗದ್ಗುರುಗಳ ನಿರ್ಯಾಣಕಾಲದ ೧೧೧೯ನೆಯ ಶಕವರ್ಷವೇ ತಪ್ಪಾಗಿದ್ದು, ಈ ತಪ್ಪಾದ ಶಕವರ್ಷವನ್ನೇ ಆಧಾರವಾಗಿಟ್ಟುಕೊಂಡು, ಮುಂದಿನ ೫ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆದದ್ದರಿಂದ ಮೊದಲಿನ ಈ ಆರೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳು ತಪ್ಪೆಂಬುದು ಸಿದ್ಧ.

ಇದರಿಂದ ವ್ಯಕ್ತವಾದದ್ದೇನೆಂದರೆ—(೧) ಮೊದಲಿನ ಈ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆದವನು, ಈ ಪ್ರಕಾರ ಸರ್ವಥೈವ ತಪ್ಪಿದ್ದರಿಂದ ಇವನು ಇವರ ಸಮಕಾಲೀನ ಲೇಖಕನೂ ಅಲ್ಲ; ಸಮೀಪಕಾಲೀನ ಲೇಖಕನೂ ಅಲ್ಲ; ಬಹು ದೂರ ಕಾಲೀನ ಲೇಖಕನಾಗಿದ್ದಾನೆಂಬುದು ಎಂದರೆ ಇವರ ನಿರ್ಯಾಣದ ನಿಜವಾದ ಕಾಲವನ್ನರಿಯದವನೆಂಬುದು ಸ್ಪಷ್ಟವಾಯಿತು. (೨) ಮೊದಲಿನ ಈ ೬ ಜನ ಜಗದ್ಗುರುಗಳ ಸಮಕಾಲೀನ ಲೇಖಕರು ಈ ಮಠೀಯ ಗುರುಪರಂಪರಾ ಪೀಠಿಗೆಯಲ್ಲಿ ಗುರುಗಳ ನಿರ್ಯಾಣಕಾಲವನ್ನು ಬರೆಯುವಾಗ್ಗೆ, ನಿರ್ಯಾಣಕಾಲದ ಸಂವತ್ಸರ, ಮಾಸ, ಪಕ್ಷ, ತಿಥಿಗಳನ್ನು ಮಾತ್ರ ಬರೆದಿಡುತ್ತಿದ್ದರೇ ಹೊರತು ನಿರ್ಯಾಣಕಾಲದ ಶಕವರ್ಷವನ್ನು ಬರೆದಿಡುತ್ತಿದ್ದಿಲ್ಲವೆಂಬುದು ಇದರಿಂದ ನಿಷ್ಪನ್ನವಾಯಿತು. (೩) ಆದುದರಿಂದಲೇ ಮುಂದೆ ಬಹುಕಾಲದ ಮೇಲೆ ಒಬ್ಬ ಲೇಖಕನು ಮೊದಲಿನ ಈ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆಯುವುದಕ್ಕೆ ಹೋಗಿ, ಈ ಪ್ರಕಾರ ಅಜ್ಞಾನದಿಂದ ಅಹೇತುಕವಾದ ಪ್ರಮಾದಗಳನ್ನು ಮಾಡಿದ್ದಾನೆಯೇ ಹೊರತು ಬುದ್ಧಿಪೂರ್ವಕವಾಗಿ ಸಹೇತುಕವಾದ ಪ್ರಮಾದಗಳನ್ನು ಮಾಡಿರುವುದಿಲ್ಲೆಂಬುದು ಸ್ಪಷ್ಟವಾಗುತ್ತದೆ.

(೨) ಇನ್ನು, ಇದೇ ಲೇಖಕನು ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷವನ್ನು ಬರೆಯುವುದಕ್ಕೆ ಹೋಗಿದ್ದರೆ, ಮೇಲೆ, ೬ನೆಯ

ಲಿಂಗಗಳು ಎಂದರೆ ಗಮಕಗಳು ಗ್ರಂಥಕಾರನ ಉದ್ದೇಶವನ್ನು ನಿರ್ಣಯಿಸುವುದಕ್ಕೆ ಸಾಧನಗಳಾಗಿರುತ್ತವೆ.

ಶ್ರೀಮನ್ಮಧ್ವಾಚಾರ್ಯರ ಶಾಖಾನಿರ್ಣಯವನ್ನೂ ಮತ್ತು ಶ್ರೀಮಜ್ಜಯತೀರ್ಥರ ಶಾಖಾನಿರ್ಣಯವನ್ನೂ ಮಾಡುವುದಕ್ಕೆ ಪೋಷಕವಾದ ಪ್ರಮಾಣಗಳಿಗೆ ಈ ಗಮಕಗಳನ್ನು ಅನ್ವಯಿಸಿ ನೋಡಿದರೆ, ಈ ಪುಣ್ಯಶ್ಲೋಕರಿಬ್ಬರೂ ಕಾಣ್ವಶಾಖೆಯ ಬ್ರಾಹ್ಮಣರೆಂಬ ಸಿದ್ಧಾಂತವು ನಿಷ್ಪನ್ನವಾಗುತ್ತದೆ. ಅದು ಹೇಗೆಂದರೆ:—

## ಶ್ರೀಮನ್ಮಧ್ವಾಚಾರ್ಯರ ಶಾಖಾನಿರ್ಣಯ

(ಅಂತರ ಪ್ರಮಾಣಗಳು)

(೧) ಶ್ರೀಮಧ್ವಾಚಾರ್ಯರು ಬೃಹದಾರಣ್ಯಕೋಪನಿಷದ್ಭಾಷ್ಯದ ಉಪಕ್ರಮದಲ್ಲಿ "[೧] **ಕಣ್ವಾಯ ಯಾಜ್ಞವಲ್ಕ್ಯೋದಾತ್ ಕಾಣ್ವಂತೇನ ಪ್ರಕೀರ್ತಿತಮ್** ।" ಎಂದು ಹೇಳಿದ್ದಾರೆ. ಎಂದರೆ, ಕಣ್ವಋಷಿಗೆ ಯಾಜ್ಞವಲ್ಕ್ಯಋಷಿಗಳು (ಈಬೃಹದಾರಣ್ಯಕ ಉಪನಿಷತ್ತನ್ನು) ಕೊಟ್ಟ ಮೂಲಕ ಅರ್ಥಾತ್ ಉಪದೇಶ ಮಾಡಿದ ಮೂಲಕ ಈ ಬೃಹದಾರಣ್ಯಕವು ಕಾಣ್ವೋಪನಿಷತ್ತೆಂದು ಹೊಗಳಲ್ಪಟ್ಟಿತು. ಅತಏವ ಪ್ರಖ್ಯಾತವಾಯಿತೆಂದು ಇತ್ಯರ್ಥ. ಈ ಅಂತರ ಪ್ರಮಾಣಕ್ಕೆ ಚೆನ್ನಾಗಿ ಅನ್ವಯಿಸುತ್ತಿದ್ದ ಉಪಕ್ರಮ, ಅಪೂರ್ವತಾ, ಉಪಪತ್ತಿ ಎಂಬ ಈ ಮೂರು ಗಮಕಗಳಿಂದ ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಹೀಗೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ:—

### 'ಉಪಕ್ರಮ'

ಪ್ರತಿಯೊಬ್ಬ ಗ್ರಂಥಕಾರನು ತನ್ನ ಮನಸ್ಸಿನಲ್ಲಿ ಯಾವುದಾದರೊಂದು ವಿಶಿಷ್ಟವಾದ ಹೇತುವನ್ನು ಇಟ್ಟುಕೊಂಡು, ಗ್ರಂಥವನ್ನು ಬರೆಯುವುದಕ್ಕೆ

---

೧ ಯಥಾತುಷ್ಟಾವ ಲಕ್ಷ್ಮೀಶಂ ಸರ್ಗಾದೌ ಚತುರಾನನಃ ।
ತಥಾ ಜಗಾದ ಸೂರ್ಯಾಯ ಯಾಜ್ಞವಲ್ಕ್ಯಾಯ ಸೋಬ್ರವೀತ್ ॥
ವಾಜಿರೂಪೇಣ ಸೂರ್ಯೇಣ ಪ್ರೋಕ್ತಂ ವಾಜಸನೇಯಕಮ್ ।
ಕಣ್ವಾಯ ಯಾಜ್ಞವಲ್ಕ್ಯೋವಾತ್ ಕಾಣ್ವಂತೇನ ಪ್ರಕೀರ್ತಿತಮ್ ॥೨॥

ಆರಂಭ ಮಾಡುತ್ತಾನೆ. ಮತ್ತು ತನ್ನ ಆ ವಿಶಿಷ್ಟವಾದ ಉದ್ದೇಶವನ್ನು ಆತನು ಆ ಗ್ರಂಥದ ಉಪಕ್ರಮದಲ್ಲಿ (ಎಂದರೆ, ಆರಂಭದಲ್ಲಿ) ವ್ಯಕ್ತಪಡಿಸುತ್ತಾನೆ. ಆದುದರಿಂದ ಮೀಮಾಂಸಕರು, ಗ್ರಂಥಕಾರನ ಉದ್ದೇಶವನ್ನು ತಿಳಿದುಕೊಳ್ಳುವುದಕ್ಕೆ ಉಪಕ್ರಮವು ಒಂದು ಸಾಧನವಾಗಿರುತ್ತದೆಂದು ಹೇಳಿದ್ದಾರೆ. ಶ್ರೀಮನ್ಮಧ್ವಾಚಾರ್ಯರು ಈ ಬೃಹದಾರಣ್ಯಕೋಪನಿಷದ್ಭಾಷ್ಯದ ಉಪಕ್ರಮದಲ್ಲಿ-ಬೃಹದಾರಣ್ಯಕೋಪನಿಷತ್ತು **ಕಾಣ್ವೋಪನಿಷತ್ತೆಂದು** ಪ್ರಖ್ಯಾತವಾಗಿರುತ್ತದೆಂದು ಸಪ್ರಮಾಣವಾಗಿ[೧] ಹೇಳಿ, ಕಾಣ್ವಶಾಖೆಯನ್ನು ಗೌರವಿಸಿದ್ದಾರೆ. ಅರ್ಥಾತ್ ಇವರು ಕಾಣ್ವಶಾಖೆಯ ಬಗ್ಗೆ ಗೌರವಪುರಸ್ಸರವಾಗಿ ಆತ್ಮೀಯ ಭಾವನೆಯನ್ನು ಎಂದರೆ ಸ್ವಶಾಖಾಭಿಮಾನವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ. ಅತಏವ ಈ ಪ್ರಕಾರ ಉಪಕ್ರಮದಲ್ಲಿ ಕಾಣ್ವಶಾಖಾಭಿಮಾನವನ್ನು ವ್ಯಕ್ತಪಡಿಸಿದ್ದರಿಂದ ಶ್ರೀಮನ್ಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

## 'ಅಪೂರ್ವತಾ'

ಅಪೂರ್ವತಾ ಎಂದರೆ ನವೀನತೆಯು; ಅರ್ಥಾತ್ ಹೊಸತನವು. ಶ್ರೀಮನ್ಮಧ್ವಾಚಾರ್ಯರು ತಾವು ಬರೆದ ಹತ್ತು ಉಪನಿಷದ್ಭಾಷ್ಯಗಳಲ್ಲಿ ಬೃಹದಾರಣ್ಯಕೋಪನಿಷದ್ಭಾಷ್ಯವೊಂದರಲ್ಲಿಯೇ ಮಾತ್ರ ಈ ಬೃಹದಾರಣ್ಯಕವು ಕಾಣ್ವಶಾಖೆಯ ಉಪನಿಷತ್ತೆಂದು ಪ್ರಖ್ಯಾತವಾಗಿರುತ್ತದೆಂದು ಕಂಠೋಕ್ತವಾಗಿ ಹೇಳಿ, ಈ ಉಪನಿಷತ್ತಿನ **ಕಾಣ್ವಶಾಖೆಯನ್ನು** ಗೌರವಿಸಿದ್ದಾರೆಯೇ ಹೊರತು ಮಿಕ್ಕ ಒಂಭತ್ತು ಉಪನಿಷದ್ಭಾಷ್ಯಗಳಲ್ಲಿ ಆಯಾ ಉಪನಿಷತ್ತಿನ ಶಾಖೆಯನ್ನು ಗೌರವಿಸುವ ಗೋಜಿಗೇನೇ ಹೋಗಿಲ್ಲ. ಅತಏವ ಬೃಹದಾರಣ್ಯಕೋಪನಿಷದ್ಭಾಷ್ಯವೊಂದರಲ್ಲಿಯೇ ಮಾತ್ರ "ಕಣ್ವಾಯ ಯಾಜ್ಞವಲ್ಕ್ಯೋದಾತ್ ಕಾಣ್ವಂತೇನ ಪ್ರಕೀರ್ತಿತಮ್ ।" ಎಂದು ಈ ಉಪನಿಷತ್ತಿನ ಕಾಣ್ವಶಾಖೆಯನ್ನು ಗೌರವಿಸಿರುವುದು ಅಪೂರ್ವತೆಯೇ ಸರಿ. ಈ ಪ್ರಕಾರ ಶ್ರೀಮನ್ಮಧ್ವಾಚಾರ್ಯರು **ಅಪೂರ್ವತೆಯಿಂದ** ಕಾಣ್ವ

---

೧ ವರಾಹ ಪುರಾಣವನ್ನು ಪ್ರಮಾಣವನ್ನಾಗಿ ಸ್ವೀಕರಿಸಿ ಹೇಳಿದ್ದಾರೆ.

ಶಾಖೆಯನ್ನು ಗೌರವಿಸಿರುವುದರಿಂದ ಈ ಶ್ರೀಮದಾಚಾರ್ಯರು ಕಾಣ್ವ ಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

(ದಶೋಪನಿಷತ್ತುಗಳ ವೇದ, ಶಾಖೆಗಳನ್ನು ಇದರಡಿಯಲ್ಲಿ ನಿರೂಪಿಸುತ್ತೇವೆ.)

| ಉಪನಿಷತ್ತುಗಳು | ಯಾವ ಶಾಖೆಯ ಸಂಹಿತೆಯಲ್ಲಿ ಅಥವಾ ಬ್ರಾಹ್ಮಣದಲ್ಲಿ ಇವೆ ? | ವೇದಗಳು |
|---|---|---|
| (೧) ಈಶಾವಾಸ್ಯ೧ | ಕಾಣ್ವಶಾಖೆಯ ಸಂಹಿತೆಯಲ್ಲಿದೆ. | ಶುಕ್ಲಯಜುರ್ವೇದ |
| (೨) ಬೃಹದಾರಣ್ಯಕ | ಕಾಣ್ವಶಾಖೆಯ ಶತಪಥ ಬ್ರಾಹ್ಮಣದಲ್ಲಿದೆ. | |
| (೩) ಕಠ | ಕಠಶಾಖೆಯ ಬ್ರಾಹ್ಮಣದಲ್ಲಿದೆ. | ಕೃಷ್ಣಯಜುರ್ವೇದ |
| (೪) ತೈತ್ತಿರೀಯ | ತೈತ್ತಿರೀಯ ಶಾಖೆಯ ಬ್ರಾಹ್ಮಣದಲ್ಲಿದೆ. | |
| (೫) ಛಾಂದೋಗ್ಯ | ತಾಂಡಿನ್ ಶಾಖೆಯ ಛಾಂದೋಗ್ಯಬ್ರಾಹ್ಮಣದಲ್ಲಿದೆ | ಸಾಮವೇದ |
| (೬) ಕೇನ | ಜೈಮಿನೀಯ ಶಾಖೆಯ ತಲವಕಾರ ಬ್ರಾಹ್ಮಣದಲ್ಲಿದೆ. | |
| (೭.) ಷಟ್ಪ್ರಶ್ನ | ಪಿಪ್ಪಲಾದ ಶಾಖೆಯ ಬ್ರಾಹ್ಮಣದಲ್ಲಿದೆ. | ಅಥರ್ವವೇದ |
| (೮) ಮುಂಡಕ | ಶೌನಕೀಯ ಶಾಖೆಯ ('ಬಭ್ರು' ಎಂಬ ಉಪಶಾಖೆಯ) ಬ್ರಾಹ್ಮಣದಲ್ಲಿದೆ. | |
| (೯) ಮಾಂಡೂಕ್ಯ | ಶೌನಕೀಯ ಶಾಖೆಯ ('ಸ್ತೈನ್ಧವಾಯನ' ಎಂಬ ಉಪಶಾಖೆಯ) ಬ್ರಾಹ್ಮಣದಲ್ಲಿದೆ. | |
| (೧೦) ಐತರೇಯ | ಆಶ್ವಲಾಯನ ಶಾಖೆಯ ಐತರೇಯ ಬ್ರಾಹ್ಮಣದಲ್ಲಿದೆ. | ಋಗ್ವೇದ |

## 'ಉಪಪತ್ತಿ'

ಬೃಹದಾರಣ್ಯಕೋಪನಿಷತ್ತಿಗೆ ಕಾಣ್ವೋಪನಿಷತ್ತೆಂಬ ಹೆಸರು ಯಾಕೆ ಪ್ರಾಪ್ತವಾಯಿತು ? ಎಂಬುದಕ್ಕೆ ಶ್ರೀಮನ್ಮಧ್ವಾಚಾರ್ಯರು ಹೀಗೆ ಉಪಪತ್ತಿಯನ್ನು ಹೇಳಿದ್ದಾರೆ:—"**ಕಣ್ವಾಯ** ಯಾಜ್ಞವಲ್ಕ್ಯೋದಾತ್ **ಕಾಣ್ವಂ** ತೇನ ಪ್ರಕೀರ್ತಿತವ್ ।" ಎಂದರೆ "ಯಾಜ್ಞವಲ್ಕ್ಯ ಋಷಿಗಳು

೧. ಈಶಾವಾಸ್ಯೋಪನಿಷತ್ತು ಸಕಲ ಉಪನಿಷತ್ತುಗಳಲ್ಲಿ ಜ್ಯೇಷ್ಠವಾದ ಉಪನಿಷತ್ತಾಗಿರುತ್ತದೆ; ಏಕೆಂದರೆ ಈ ಉಪನಿಷತ್ತು ಸಂಹಿತೆಯಲ್ಲಿರುತ್ತದೆ. ಮಿಕ್ಕ ಉಪನಿಷತ್ತುಗಳೆಲ್ಲ ಬ್ರಾಹ್ಮಣದಲ್ಲಿರುತ್ತವೆ. ಸಂಹಿತೆಯು ಬ್ರಾಹ್ಮಣಕ್ಕಿಂತ ಪ್ರಾಚೀನವಾದದ್ದು. ಅತಏವ ದಶೋಪನಿಷತ್ತುಗಳ ಹೆಸರುಗಳನ್ನು ಹೇಳುವಾಗ್ಗೆ, ಮೊಟ್ಟಮೊದಲು ಈ ಈಶೋಪನಿಷತ್ತಿನ ನಾಮನಿರ್ದೇಶವನ್ನು ಮಾಡಿ, ಆ ಬಳಿಕ ಮಿಕ್ಕ ಒಂಬತ್ತು ಉಪನಿಷತ್ತುಗಳ ಹೆಸರುಗಳನ್ನು ಹೇಳುತ್ತಾರೆ.

(ಈ ಬೃಹದಾರಣ್ಯಕೋಪನಿಷತ್ತನ್ನು) ಕಣ್ವಋಷಿಗೆ ಕೊಟ್ಟ ಮೂಲಕ (ಅರ್ಥಾತ್ ಉಪದೇಶ ಮಾಡಿದ ಮೂಲಕ) ಇದು ಕಾಣ್ವೋಪನಿಷತ್ತೆಂದು ಹೊಗಳಲ್ಪಟ್ಟಿತು." ಈ ಪ್ರಕಾರ ಶ್ರೀಮನ್ಮಧ್ವಾಚಾರ್ಯರು, ಬೃಹದಾರಣ್ಯಕವು ಕಾಣ್ವಶಾಖೆಯ ಉಪನಿಷತ್ತೆಂದು ಪ್ರಖ್ಯಾತವಾಗಿರುತ್ತದೆಂಬುದನ್ನು ಸೋಪಪತ್ತಿಕವಾಗಿಯೂ ಸಪ್ರಮಾಣವಾಗಿಯೂ ಹೇಳುವುದನ್ನು ನೋಡಿದರೆ, ಈ ಶ್ರೀಮದಾಚಾರ್ಯರ ಹೃದಯದಲ್ಲಿ ಕಾಣ್ವಶಾಖೆಯ ಬಗ್ಗೆ ಆತ್ಮೀಯ ಭಾವನೆಯು ಉತ್ಕಟವಾಗಿತ್ತೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಅತಏವ ಶ್ರೀಮನ್ಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ, ಉಪಕ್ರಮ, ಅಪೂರ್ವತಾ, ಉಪಪತ್ತಿಗಳೆಂಬ ಈ ಮೂರು ಗಮಕಗಳಿಂದ ಶ್ರೀಮನ್ಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು.

(೨) ಇನ್ನು, ತೈತ್ತಿರೀಯ ಶಾಖೆಯ೧ ಬ್ರಾಹ್ಮಣರಾದ ಶ್ರೀಶಂಕರಾಚಾರ್ಯರಾಗಲಿ, ಶ್ರೀರಂಗರಾಮಾನುಜಾಚಾರ್ಯರಾಗಲಿ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು ಎಲ್ಲಿಯೂ ಸಂಬೋಧಿಸಿರುವುದಿಲ್ಲ. ಆದರೆ ಶೃಂಗೇರಿ ಮಠದ ಆದ್ಯಜಗದ್ಗುರುಗಳಾದ ಮತ್ತು ಕಾಣ್ವಶಾಖೆಯ೧ ಬ್ರಾಹ್ಮಣರಾದ

---

೧ ಶ್ರೀಶಂಕರಾಚಾರ್ಯರು ತಮ್ಮ ಶಿಷ್ಯರಾದ ಶ್ರೀಸುರೇಶ್ವರಾಚಾರ್ಯರಿಗೆ ಹೀಗೆ ಹೇಳಿದ್ದಾರೆ:-

ಸತ್ಯಂ ಯದಾತ್ಥ ವಿನಯಿನ್ಮಮ ಯಾಜುಷೀಯಾ ।
ಶಾಖಾ ತದನ್ತಗತ ಭಾಷ್ಯನಿಬನ್ಧ ಇಷ್ಟಃ ॥
ತದ್ವಾರ್ತ್ತಿಕಂ ಮಮ ಕೃತೇ ಭವತಾಪ್ರಣೇಯಂ ।
ಸಚ್ಚೇಷ್ಟಿತಂ ಪರಹಿತೈಕ ಫಲಂ ಪ್ರಸಿದ್ಧಮ್ ॥೬೩॥
ತದ್ವತ್ತ್ವದೀಯಾ ಖಲು ಕಾಣ್ವಶಾಖಾ ।
ಮಮಾಪಿ ತತ್ರಾಸ್ತಿ-ತದನ್ತ ಭಾಷ್ಯಮ್ ॥
ತದ್ವಾರ್ತ್ತಿಕಂ ಚಾಪಿ ವಿಧೇಯಮಿಷ್ಟಂ ।
ಪರೋಪಕಾರಾಯ ಸತಾಂ ಪ್ರವೃತ್ತಿಃ ॥೬೬॥

(ಮಾಧವೀಯ ಶಂಕರವಿಜಯ ಸ. ೧೩)

ಶ್ರೀಸುರೇಶ್ವರಾಚಾರ್ಯರು ಮಾತ್ರ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯವಾರ್ತಿಕದಲ್ಲಿ ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು ಸಂಬೋಧಿಸಿ, ತಮ್ಮ ಕಾಣ್ವಶಾಖಾಭಿಮಾನವನ್ನು ಹೀಗೆ ವ್ಯಕ್ತಪಡಿಸಿದ್ದಾರೆ:—

ಶ್ರೀಸುರೇಶ್ವರಾಚಾರ್ಯರು ತಮ್ಮ ಈ ಬೃಹದಾರಣ್ಯಕೋಪನಿಷದ್ಭಾಷ್ಯವಾರ್ತಿಕದ ಮಂಗಲಾಚರಣದಲ್ಲಿ ಮೊಟ್ಟಮೊದಲು ಶ್ರೀಪರಮಾತ್ಮನನ್ನು ಸ್ತುತಿಸಿ, ತದನಂತರ **ಗುರುಸ್ತುತಿಯನ್ನು ಮಾಡುವಸ್ಥಾನದಲ್ಲಿ** (ಅತಏವ) ಆದರಪೂರ್ವಕವಾಗಿ ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು ಹೀಗೆ ಸಂಬೋಧಿಸಿದ್ದಾರೆ:—

> ಯಾಂ **ಕಾಣ್ವೋಪನಿಷಚ್ಛಲೇನ** ಸಕಲಾಮ್ನಾಯಾರ್ಥಸಂಶೋಧಿನೀಂ ।
> ಸಂಚಕ್ರುರ್ಗುರವೋಽನುವೃತ್ತ್ಯಗುರವೋ ವೃತ್ತಿಂ ಸತಾಂ ಶಾನ್ತಯೇ ॥
> ಅರ್ಥಾವಿಷ್ಕರಣಾಂ ಕುತಾರ್ಕಿಕಕೃತಾಶಙ್ಕಾ ಸಮುಚ್ಛಿತ್ತಯೇ ।
> ತಸ್ಯಾ ನ್ಯಾಯ ಸಮಾಶ್ರಿತೇನ ವಚಸಾ ಪ್ರಕ್ರಮ್ಯತೇ ಲೇಶತಃ ॥೨॥

---

**ಅರ್ಥ:**— ಹೇ, ವಿನಯಶಾಲಿಯಾದ ಸುರೇಶ್ವರಾಚಾರ್ಯ, ನೀನು ಮಾತನಾಡಿದ್ದು ಸತ್ಯವು. **ನನ್ನ ತೈತ್ತಿರೀಯ ಶಾಖೆಯ** ಉಪನಿಷದ್ಭಾಷ್ಯಕ್ಕೆ ವಾರ್ತಿಕವು ಇಷ್ಟವಾಗಿದೆ. ನನಗೋಸ್ಕರ ಆ ವಾರ್ತಿಕವು ನಿನ್ನಿಂದ ರಚಿಸಲ್ಪಡಬೇಕು. ಸಜ್ಜನರ ಕೃತ್ಯಗಳು ಕೇವಲ ಪರಹಿತಕ್ಕೋಸ್ಕರವಾಗಿಯೇ ಇರುತ್ತವೆಂಬುದು ಪ್ರಸಿದ್ಧವೇ ಇದೆ. (೬೫) ಅದರಂತೆಯೇ **ನಿನ್ನ ಕಾಣ್ವಶಾಖೆಯ** ಉಪನಿಷತ್ತಿಗೂ (ಎಂದರೆ ಬೃಹದಾರಣ್ಯಕೋಪನಿಷತ್ತಿಗೂ) ನಾನು ಭಾಷ್ಯವನ್ನು ಬರೆದಿದ್ದೇನೆ. ಈ ಭಾಷ್ಯಕ್ಕಾದರೂ ವಾರ್ತಿಕವು ಅವಶ್ಯವಿದ್ದುದರಿಂದ ಇದು ನಿನ್ನಿಂದ ರಚಿಸಲ್ಪಡಬೇಕು. ಯಾಕೆಂದರೆ, ಸಜ್ಜನರ ಪ್ರವೃತ್ತಿಯೇ ಪರೋಪಕಾರಕ್ಕೋಸ್ಕರವಾಗಿ ಇರುತ್ತದೆ. (೬೬) ಇವೆರಡು ಶ್ಲೋಕಗಳಲ್ಲಿ–ಶ್ರೀಶಂಕರಾಚಾರ್ಯರು ತಾವು ತೈತ್ತಿರೀಯ ಶಾಖೆಯ ಬ್ರಾಹ್ಮಣರೆಂದೂ, ಶ್ರೀಸುರೇಶ್ವರಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂದೂ ಕಂಠೋಕ್ತವಾಗಿ ಹೇಳಿದ್ದಾರೆ. ಇದಲ್ಲದೆ ಇವೆರಡು ಶ್ಲೋಕಗಳಲ್ಲಿ ಹೇಳಿದಂತೆ ಶ್ರೀಸುರೇಶ್ವರಾಚಾರ್ಯರು ರಚಿಸಿದ ಬೃಹದಾರಣ್ಯಕೋಪನಿಷದ್ಭಾಷ್ಯವಾರ್ತಿಕವೂ, ತೈತ್ತಿರೀಯೋಪನಿಷದ್ಭಾಷ್ಯವಾರ್ತಿಕವೂ ಉಪಲಬ್ಧವಿದ್ದು, ಇವೆರಡೂ ಗ್ರಂಥಗಳು ಪುಣೆಯ ಆನಂದಾಶ್ರಮದಲ್ಲಿ ಮುದ್ರಿಸಲ್ಪಟ್ಟಿವೆ.

ಅರ್ಥ:—ಗುರುಪ್ರಸಾದವನ್ನು ಸಂಪಾದಿಸಿದಂಥ ಗುರುಗಳು ಈ ಕಾಣ್ವೋಪನಿಷತ್ತಿನ ನಿಮಿತ್ತದಿಂದ ಸಕಲ ವೇದಗಳ ಅರ್ಥವನ್ನು ಸ್ಪಷ್ಟ ಮಾಡುವುದಕ್ಕೋಸ್ಕರ ಸಜ್ಜನರ ಶಾಂತ್ಯರ್ಥವಾಗಿ ಯಾವ ಭಾಷ್ಯವನ್ನು ಮಾಡಿದರೋ, ಆ ಭಾಷ್ಯದ ಅರ್ಥಾವಿಷ್ಕರಣವು, ನ್ಯಾಯಘಟಿತವಾದ ಭಾಷೆಯಿಂದ ಕುತಾರ್ಕಿಕರ ಸಂಶಯಗಳನ್ನು ನಿರ್ಮೂಲನ ಮಾಡುವುದ ಕ್ಕೋಸ್ಕರವಾಗಿ ಸ್ವಲ್ಪ ಮಟ್ಟಿಗೆ ಉಪಕ್ರಮಿಸಲ್ಪಡುತ್ತದೆ.

ಈ ಶ್ರೀಸುರೇಶ್ವರಾಚಾರ್ಯರಂತೆಯೇ ಶ್ರೀಮನ್ಮಧ್ವಾಚಾರ್ಯರೂ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದ ಮಂಗಲಾಚರಣದಲ್ಲಿ ಮೊಟ್ಟಮೊದಲು ಶ್ರೀಪರಮಾತ್ಮನನ್ನು ಸ್ತುತಿಸಿ, ತದನಂತರ ಗುರುಸ್ತುತಿ ಯನ್ನು ಮಾಡುವ ಸ್ಥಾನದಲ್ಲಿ (ಅತಏವ) ಗೌರವಪುರಸ್ಸರವಾಗಿ ಬೃಹದಾ ರಣ್ಯಕವನ್ನು ಕಾಣ್ವೋಪನಿಷತ್ತೆಂದು ಹೀಗೆ ಸಂಬೋಧಿಸಿದ್ದಾರೆ:—

ಯಥಾ ತುಷ್ಟಾವ ಲಕ್ಷ್ಮೀಶಂ ಸರ್ಗಾದೌ ಚತುರಾನನಃ ।
ತಥಾ ಜಗಾದ ಸೂರ್ಯಾಯ ಯಾಜ್ಞವಲ್ಕ್ಯಾಯ ಸೋಽಬ್ರವೀತ್ ॥
ವಾಜಿರೂಪೇಣ ಸೂರ್ಯೇಣ ಪ್ರೋಕ್ತಂ ವಾಜಸನೇಯಕಮ್ ।
ಕಣ್ವಾಯ ಯಾಜ್ಞವಲ್ಕ್ಯೋಽದಾತ್ **ಕಾಣ್ವಂ ತೇನ ಪ್ರಕೀರ್ತಿತಮ್** ॥೨॥

ಅರ್ಥ:—ಚತುರ್ಮುಖಬ್ರಹ್ಮನು ಸೃಷ್ಟಿಯ ಉತ್ಪತ್ತಿಯ ಆದಿಯಲ್ಲಿ ಲಕ್ಷ್ಮೀಶನನ್ನು ಹೇಗೆ ಸ್ತುತಿಸಿದನೋ, ಹಾಗೆಯೇ ಸೂರ್ಯನಿಗೆ (ಈ ಬೃಹ ದಾರಣ್ಯಕೋಪನಿಷತ್ತನ್ನು ಕಿಂಬಹುನಾ ಶುಕ್ಲಯಜುರ್ವೇದವನ್ನು) ಹೇಳಿ ದನು. ಆ ಸೂರ್ಯನು ಇದನ್ನು ಯಾಜ್ಞವಲ್ಕ್ಯಋಷಿಗೆ ಉಪದೇಶ ಮಾಡಿ ದನು. ಸೂರ್ಯನು ಇದನ್ನು ವಾಜಿರೂಪದಿಂದ ಹೇಳಿದ್ದರಿಂದ ಈ ಬೃಹ ದಾರಣ್ಯಕೋಪನಿಷತ್ತಿಗೆ (ಇಷ್ಟೇ ಅಲ್ಲ ಸಮಸ್ತಶುಕ್ಲಯಜುರ್ವೇದಕ್ಕೂ) 'ವಾಜಸನೇಯ' ಎಂಬ ಹೆಸರು ಪ್ರಾಪ್ತವಾಯಿತು. ಯಾಜ್ಞವಲ್ಕ್ಯರು ಈ ಬೃಹದಾರಣ್ಯಕೋಪನಿಷತ್ತನ್ನು ಕಣ್ವಋಷಿಗೆ ಕೊಟ್ಟ ಮೂಲಕ ಎಂದರೆ ಉಪದೇಶ ಮಾಡಿದ ಮೂಲಕ **ಈ ಬೃಹದಾರಣ್ಯಕವು ಕಾಣ್ವೋಪನಿಷ ತ್ತೆಂದು ಪ್ರಖ್ಯಾತವಾಯಿತು.**

ಫಲಿತಾರ್ಥವೇನೆಂದರೆ, **ತೈತ್ತಿರೀಯ ಶಾಖೆಯ ಬ್ರಾಹ್ಮಣರಾದ** ಶ್ರೀಶಂಕರಾಚಾರ್ಯರಾಗಲಿ, ಶ್ರೀರಂಗರಾಮಾನುಜಾಚಾರ್ಯರಾಗಲಿ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ, ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು ಎಲ್ಲಿಯೂ ಸಂಬೋಧಿಸಿರುವುದಿಲ್ಲ. ಆದರೆ **ಕಾಣ್ವಶಾಖೆಯ ಬ್ರಾಹ್ಮಣರಾದ** ಶ್ರೀಸುರೇಶ್ವರಾಚಾರ್ಯರು, ಮಾತ್ರ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯವಾರ್ತಿಕದಲ್ಲಿ, ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು ಸಂಬೋಧಿಸಿ, ತಮ್ಮ ಕಾಣ್ವಶಾಖಾಭಿಮಾನವನ್ನು ಅರ್ಥಾತ್ ತಾವು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಹೇಗೆ ಚೆನ್ನಾಗಿ ವ್ಯಕ್ತಪಡಿಸಿದ್ದಾರೆಯೋ, ಹಾಗೆಯೇ ಶ್ರೀಮನ್ಮಧ್ವಾಚಾರ್ಯರೂ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ, ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು ಸಂಬೋಧಿಸಿ, ಕಾಣ್ವಶಾಖಾಭಿಮಾನವನ್ನು ವ್ಯಕ್ತಪಡಿಸಿದ್ದರಿಂದ ಶ್ರೀಸುರೇಶ್ವರಾಚಾರ್ಯರಂತೆಯೇ ಶ್ರೀಮನ್ಮಧ್ವಾಚಾರ್ಯರೂ ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

(೩) ಈ ಸಿದ್ಧಾಂತವನ್ನು ಪೋಷಿಸುವ ಇನ್ನೊಂದು ಮಹತ್ವವಾದ ಸಂಗತಿಯನ್ನು ಈ ಸ್ಥಳದಲ್ಲಿ ಹೇಳುವುದು ಅತ್ಯವಶ್ಯವಾಗಿದೆ. ಅದೇನೆಂದರೆ, "**ಸ್ಥಾನಂ ಸಮಾಖ್ಯಾತಃ ಪ್ರಬಲಮ್**" ಎಂದರೆ, "ಯೌಗಿಕ ಅರ್ಥಕ್ಕಿಂತಲೂ **ಸ್ಥಾನದಿಂದ** ಪ್ರಾಪ್ತವಾದ ರೂಢಾರ್ಥವು ಬಲವತ್ತರವಾಗಿರುತ್ತದೆ." ಎಂದು ಮೀಮಾಂಸಕರು ಹೇಳಿದ್ದಾರೆ. ಈ ತತ್ತ್ವವಕ್ಕನುಸರಿಸಿ, ಶ್ರೀಮತ್ ಸುರೇಶ್ವರಾಚಾರ್ಯರು ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯವಾರ್ತಿಕದ ಮಂಗಲಾಚರಣದಲ್ಲಿ ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು **ಗುರುಸ್ತುತಿಯನ್ನು ಮಾಡುವ ಸ್ಥಾನದಲ್ಲಿ** ಸಂಬೋಧಿಸಿದ್ದಾರೆ. ಅತಏವ. ಶ್ರೀಸುರೇಶ್ವರಾಚಾರ್ಯರು ತಮ್ಮ ಕಾಣ್ವಶಾಖೆಯ ವಿಷಯವಾಗಿ ಎಂದರೆ ಕಾಣ್ವಶಾಖೆಯ ಪ್ರವರ್ತಕರಾದ ತಮ್ಮ ಕಣ್ವಋಷಿಗಳ ವಿಷಯವಾಗಿ ತಮ್ಮ ಗುರುಭಾವನೆಯನ್ನು ಸ್ಥಾನಮಾಹಾತ್ಮ್ಯದಿಂದ ವ್ಯಕ್ತಪಡಿಸಿ, ತಾವು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಸ್ಪಷ್ಟಮಾಡಿದ್ದಾರೆಂಬುದು ಸಿದ್ಧ. ಈ ಶ್ರೀಸುರೇಶ್ವರಾಚಾರ್ಯರಂತೆಯೇ ಶ್ರೀಮನ್ಮಧ್ವಾಚಾರ್ಯರೂ ತಾವು ಬರೆದ ಬೃಹದಾರಣ್ಯಕೋಪನಿಷದ್ಭಾಷ್ಯದ



ಶೃಂಗೇರಿ ಮಠದ ಆದ್ಯಜಗದ್ಗುರುಗಳಾದ
ಶ್ರೀಸುರೇಶ್ವರಾಚಾರ್ಯರು





ದ್ವೈತ ಮತೋದ್ಧಾರಕರಾದ
ಶ್ರೀಮಧ್ವಾಚಾರ್ಯರು




ಉಡುಪಿ, ಪಾಜಕಕ್ಷೇತ್ರ, ಕಾಣ್ವತೀರ್ಥಗಳ
ನಕಾಶೆ

ಮಂಗಲಾಚರಣದಲ್ಲಿ ಬೃಹದಾರಣ್ಯಕವನ್ನು ಕಾಣ್ವೋಪನಿಷತ್ತೆಂದು **ಗುರು ಸ್ತುತಿಯನ್ನು ಮಾಡುವ ಸ್ಥಾನದಲ್ಲಿಯೇ** ಸಂಬೋಧಿಸಿದ್ದಾರೆ. ಇಷ್ಟು ಮಾತ್ರವೇ ಅಲ್ಲ, ಈ **ಗುರುಸ್ಥಾನದಲ್ಲಿ** (ಬೃಹದಾರಣ್ಯಕೋಪ ನಿಷತ್ತಿನ ಇತಿಹಾಸವನ್ನು ಹೇಳುವ ವ್ಯಾಜದಿಂದ) ಯಾಜ್ಞವಲ್ಕ್ಯ, ಕಣ್ವ ಋಷಿಗಳ ನಾಮನಿರ್ದೇಶವನ್ನು ಸಹ ಮಾಡಿದ್ದಾರೆ. ಅತಏವ ಶ್ರೀಮನ್ಮ ಧ್ವಾಚಾರ್ಯರು "ಸ್ಥಾನಂ ಸಮಾಖ್ಯಾತಃ ಪ್ರಬಲಮ್" ಎಂಬ ನ್ಯಾಯ ದಂತೆ ಯಾಜ್ಞವಲ್ಕ್ಯ, ಕಣ್ವಋಷಿಗಳ ಬಗ್ಗೆ ತಮ್ಮ ಗುರುಭಾವನೆಯನ್ನು ಸ್ಥಾನಮಹಿಮೆಯಿಂದ ಪ್ರಕಟ ಮಾಡಿ, ತಾವು ಕಾಣ್ವಶಾಖೆಯ ಬ್ರಾಹ್ಮ ಣರೆಂಬುದನ್ನು ಸೂರ್ಯಪ್ರಕಾಶದಷ್ಟು ಸ್ಪಷ್ಟ ಮಾಡಿದ್ದಾರೆಂಬುದು ಸಿದ್ಧ.

(೪) ಇನ್ನು, ಶ್ರೀಸುರೇಶ್ವರಾಚಾರ್ಯರು ಯಾಜ್ಞವಲ್ಕ್ಯ ಸ್ಮೃತಿಗೆ ತಾವು ಬರೆದ "ಬಾಲಕ್ರೀಡಾ" ಎಂಬ ಟೀಕೆಯ ಕೊನೆಯಲ್ಲಿ, ತಮ್ಮ ಕಾಣ್ವಶಾಖೆಯ ಮೂಲ ಉತ್ಪಾದಕ ಋಷಿಗಳಾದ ಶ್ರೀಯಾಜ್ಞವಲ್ಕ್ಯ ರನ್ನು ಗೌರವ ಪುರಸ್ಸರವಾಗಿ ಹೀಗೆ ಸಂಬೋಧಿಸಿದ್ದಾರೆ:—

ಲಬ್ಧ್ವಾ ರಹಸ್ಯಾನಿ ಸುದುರ್ಲಭಾನಿ ಯಜೂಂಷಿ ಶುಕ್ಲಾನಿ
ವಿವಸ್ವತೋ ಯಃ ।
ಸ್ವರ್ಗಾಪವರ್ಗಾವಕರೋತ್ ಪ್ರಕಾಶೌ ಜಯತ್ಯಸೌ
**ಬ್ರಹ್ಮವಿದೇಕಹಂಸಃ** ॥

ಅರ್ಥ:—ಯಾರು, ರಹಸ್ಯಪೂರ್ಣವಾದ ಮತ್ತು ಸುದುರ್ಲಭವಾದ ಎಂದರೆ ಅತ್ಯಂತ ಶ್ರೇಷ್ಠವಾದ ಶುಕ್ಲಯಜುರ್ವೇದವನ್ನು ಸೂರ್ಯನಿಂದ ಸಂಪಾದಿಸಿ, ಸ್ವರ್ಗ, ಮೋಕ್ಷಗಳನ್ನು ಪ್ರಕಾಶಮಯವಾಗಿ ಮಾಡಿದರೋ, **ಆ ಬ್ರಹ್ಮಜ್ಞಾನಿಗಳಾದ ಶ್ರೇಷ್ಠಯತಿಗಳು** (ಎಂದರೆ, ಶ್ರೀಯಾಜ್ಞವ ಲ್ಕ್ಯರು) ಜಯಶಾಲಿಗಳಾಗಿರುವರು.

ಶ್ರೀಸುರೇಶ್ವರಾಚಾರ್ಯರು ಈ ಶ್ಲೋಕದಲ್ಲಿ ಶ್ರೀಯಾಜ್ಞವಲ್ಕ್ಯ ರನ್ನು "**ಬ್ರಹ್ಮವಿದೇಕಹಂಸಃ**" ಎಂದು ಗೌರವಪುರಸ್ಸರವಾಗಿ ಸಂಬೋ ಧಿಸಿ, ತಾವು ಶ್ರೀಯಾಜ್ಞವಲ್ಕ್ಯರ ಅನುಯಾಯಿಗಳಾದ ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಸ್ಪಷ್ಟ ಮಾಡಿದ್ದಾರೆ. ಈ ಶ್ರೀಸುರೇಶ್ವರಾಚಾರ್ಯ ರಂತೆಯೇ ಶ್ರೀಮನ್ಮಧ್ವಾಚಾರ್ಯರೂ ತಾವು ಬರೆದ ಬೃಹದಾರಣ್ಯಕೋ

ಪನಿಷದ್ಭಾಷ್ಯದಲ್ಲಿ ಶಾಕಲ್ಯಬ್ರಾಹ್ಮಣದ ಕೊನೆಯಲ್ಲಿ, ಶ್ರೀಯಾಜ್ಞವಲ್ಕ್ಯ ರನ್ನು "**ಯಾಜ್ಞವಲ್ಕ್ಯೋ ಮಹಾಮುನಿಃ**" ಎಂದು ಗೌರವ ಪುರಸ್ಸರವಾಗಿ ಸಂಬೋಧಿಸಿದ್ದಾರೆ. ಅತಏವ ಶ್ರೀ ಸುರೇಶ್ವರಾಚಾರ್ಯರಂತೆಯೇ ಶ್ರೀಮಧ್ವಾಚಾರ್ಯರೂ ಶ್ರೀಯಾಜ್ಞವಲ್ಕ್ಯರ ಅನುಯಾಯಿಗಳಾದ ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

(ಬಾಹ್ಯ ಪ್ರಮಾಣಗಳು)

(೫) ಶ್ರೀಮನ್ಮಧ್ವಾಚಾರ್ಯರು ಕಾಣ್ವತೀರ್ಥದ ಬಗ್ಗೆ ಪರಮ ಭಕ್ತಿಭಾವವನ್ನೂ ಉತ್ಕಟವಾದ ಆತ್ಮೀಯ ಭಾವನೆಯನ್ನೂ ವ್ಯಕ್ತಪಡಿಸಿ, ತಾವು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಹೀಗೆ ಸ್ಪಷ್ಟಮಾಡಿದ್ದಾರೆ:—

## ಪರಮ ಭಕ್ತಿಭಾವ

ಶ್ರೀಮದಾನಂದತೀರ್ಥರು ಕಾಣ್ವತೀರ್ಥವನ್ನು ಕುರಿತು ಎರಡು ಸಾರೆ ಪರಮ ಭಕ್ತಿಭಾವವನ್ನು ವ್ಯಕ್ತಪಡಿಸಿರುವುದನ್ನು ಸುಮಧ್ವ ವಿಜಯ ಕಾರರು ಹೀಗೆ ಚಿತ್ರಿಸಿದ್ದಾರೆ:—

ಇತ್ಥಂ ಸದ್ಭಿಃ **ಸದ್ಭಿ**ರರ್ಚ್ಯೋ ಧರಾಯಾಂ ಚಕ್ರೇ ವಾಸಂ
ಶೇಷಶಯ್ಯೇ ಶಯಾನೇ ।
ಗ್ರಾಮೇ ವಾತೈಃ ಪಾವಿತೇ **ಕಾಣ್ವತೀರ್ಥೈ**ರ್ಭಕ್ತ ಪ್ರೀತ್ಯಾ
ಸನ್ಮಠೇಽಸೌ ನ ಬೋಧಃ ॥

(ಸುಮಧ್ವವಿಜಯ ೧೫-೧೪೦)

ಅರ್ಥ:- ಭೂಮಿಯಲ್ಲಿ ಹೀಗಿರತಕ್ಕ ಎಂದರೆ ಭಕ್ತ್ಯಾದಿ ಗುಣಗಳುಳ್ಳ ಸಜ್ಜನರಿಂದ ಸನ್ಮಾನಿಸಲ್ಪಟ್ಟ ಶ್ರೀಮನ್ಮಧ್ವಾಚಾರ್ಯರು, ಶೇಷಶಾಯಿಯಾದ ಶ್ರೀಹರಿಯು ನಿದ್ರಿಸಲಾರಂಭಿಸಲು ಅರ್ಥಾತ್ ಚಾತುರ್ಮಾಸ್ಯ ವಾರಂಭವಾಗಲು, ಪಾವನವಾದ ಕಾಣ್ವತೀರ್ಥೋದಕದ ಮೇಲೆ ಹಾಯಿದು ಬಂದಂಥ ಅತಏವ ಕಾಣ್ವತೀರ್ಥದ ಪವಿತ್ರವಾದ ಗಾಳಿಯಿಂದ ಪುನೀತವಾದಂಥ ಗ್ರಾಮದಲ್ಲಿ (ಎಂದರೆ ಕಾಣ್ವತೀರ್ಥದ ದಂಡೆಯ ಮೇಲಿದ್ದ ಗ್ರಾಮದಲ್ಲಿ) ಇರುವ ಉತ್ತಮವಾದ ಮಠದಲ್ಲಿ ಚಾತುರ್ಮಾಸ್ಯ ವ್ರತ ವನ್ನು ಕೈಕೊಂಡು, ಭಕ್ತರಲ್ಲಿ ಪ್ರೀತಿಯಿಂದ ವಾಸಮಾಡಿದರು.

ಶ್ರೀಮಧ್ವಾಚಾರ್ಯರು, ಕಾಣ್ವತೀರ್ಥೋದಕದ ಮೇಲೆ ಹಾಯಿದು

ಬಂದಂಥ ಗಾಳಿಯೇ ಪರಮ ಪವಿತ್ರವಾದದ್ದೆಂದು ಭಾವಿಸಿರುವುದನ್ನು ನೋಡಿದರೆ, ಇವರ ಹೃದಯದಲ್ಲಿ ಕಾಣ್ವತೀರ್ಥದ ಬಗ್ಗೆ ಅತ್ಯಂತ ಉತ್ಕಟವಾದ ಪೂಜ್ಯಬುದ್ಧಿಯು ವಾಸವಾಗಿತ್ತೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಇದೇ ರೀತಿಯಾಗಿ ಪುತ್ತೊಮ್ಮೆ ಶ್ರೀಮನ್ಮಧ್ವಾಚಾರ್ಯರು ಸೂರ್ಯಗ್ರಹಣಕಾಲದಲ್ಲಿ ಈ ಕಾಣ್ವತೀರ್ಥದ ಬಗ್ಗೆ ಪರಮಭಕ್ತಿಭಾವವನ್ನು ವ್ಯಕ್ತಪಡಿಸಿರುವುದನ್ನು ಸುಮಧ್ವವಿಜಯಕಾರರು ಹೀಗೆ ನಿರೂಪಿಸಿದ್ದಾರೆ:-

ಆದ್ರಾಂಗಾಃ ಸಪದಿ ನಿಮಜ್ಜನಾತ್ **ಸರಸ್ಯಾಂ ಕಣ್ವಸ್ಯ**
**ದ್ವಿಜವೃಷಭಸ್ಯ ವಲ್ಲಭಾಯಾಮ್** ।
ತತ್ರಾಯನ್ ಖರಕಿರಣೋಪರಾಗಹೇತೋರ್ಗ್ರಾಮೀಣಾ
ಅಪಿ ಸಕಲಾಃ ಸಬಾಲವೃದ್ಧಾಃ ॥
(ಸುಮಧ್ವವಿಜಯ ೧೬-೧೧)

ಅರ್ಥ:- ಶ್ರೀಮನ್ಮಧ್ವಾಚಾರ್ಯರು ಸೂರ್ಯಗ್ರಹಣದ ನಿಮಿತ್ತವಾಗಿ ಆಬಾಲವೃದ್ಧರಿಂದೊಡಗೂಡಿ, **ಶ್ರೇಷ್ಠಬ್ರಾಹ್ಮಣರಾದ ಕಣ್ವರಿಗೆ ಪ್ರಿಯವಾದ ಸರೋವರದಲ್ಲಿ** ಎಂದರೆ **ಕಾಣ್ವತೀರ್ಥದಲ್ಲಿ** ಸ್ನಾನ ಮಾಡಿ, ತೊಯಿಸಿಕೊಂಡಂಥ ಶರೀರವುಳ್ಳವರಾಗಿ ಸ್ನಾನಾರ್ಥವಾಗಿ ಸಮುದ್ರವನ್ನು ಕುರಿತು ಪ್ರಾಪ್ತರಾದರು.

ಇತ್ಯರ್ಥವೇನೆಂದರೆ, ಶ್ರೀಮದಾನಂದತೀರ್ಥರು ಕಾಣ್ವತೀರ್ಥದ ಬಗ್ಗೆ ತಮ್ಮ ಹೃದಯದಲ್ಲಿರುವ ಅತ್ಯಂತ ಉತ್ಕಟವಾದ ಭಕ್ತಿಭಾವವನ್ನು ವ್ಯಕ್ತಪಡಿಸಿ, ತಾವು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಸೂರ್ಯಪ್ರಕಾಶದಷ್ಟು ಸ್ಪಷ್ಟಮಾಡಿದ್ದಾರೆ, ಇದೇ ಮೇರೆಗೆ ಈ ಶ್ರೀಮದಾಚಾರ್ಯರು ಈ ಕಾಣ್ವತೀರ್ಥದ ಬಗ್ಗೆ ಅತ್ಯುತ್ಕಟವಾದ ಆತ್ಮೀಯ ಭಾವನೆಯನ್ನೂ ವ್ಯಕ್ತಪಡಿಸಿದ್ದಾರೆಂಬುದನ್ನು ಸ್ಪಷ್ಟಮಾಡಿ, ಈ ಶ್ರೀಮನ್ಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬ ಸಿದ್ಧಾಂತವನ್ನು ದೃಢೀಕರಿಸುವಾ.

## ಅತ್ಯುತ್ಕಟವಾದ ಆತ್ಮೀಯ ಭಾವನೆಯು

ಶ್ರೀಮಧ್ವಾಚಾರ್ಯರು ಪಾಜಕಕ್ಷೇತ್ರದಲ್ಲಿ ಅವತರಿಸಿದ್ದಾರೆಂಬುದು

ಪ್ರಸಿದ್ಧವಾಗಿಯೇ ಇದೆ. ಈ ಪಾಜಕಕ್ಷೇತ್ರದ ನಾಲ್ಕೂ ದಿಕ್ಕುಗಳಿಗೆ ಒಂದೊಂದು ದಿಕ್ಕಿಗೆ ಒಂದೊಂದರಂತೆ ಶ್ರೀ ಪರಶುರಾಮದೇವರಿಂದ ನಿರ್ಮಿಸಲ್ಪಟ್ಟ ನಾಲ್ಕು ತೀರ್ಥಗಳು ಅತಿ ಸಮೀಪದಲ್ಲಿಯೇ ಇವೆ. ಎಂದರೆ **ಪೂರ್ವಕ್ಕೆ** ಒಂದು ಮೈಲಿನ ಮೇಲೆ **ಪರಶುತೀರ್ಥ**ವೂ, ಪಶ್ಚಿಮಕ್ಕೆ ಒಂದು ಮೈಲಿನ ಮೇಲೆ **ಗದಾತೀರ್ಥ**ವೂ, ಉತ್ತರಕ್ಕೆ ಒಂದು ಮೈಲಿನ ಮೇಲೆ **ಬಾಣತೀರ್ಥ**ವೂ, ಹಾಗೂ ದಕ್ಷಿಣದಿಕ್ಕಿಗೆ ಎರಡು ಮೈಲುಗಳ ಮೇಲೆ **ಧನುಸ್ತೀರ್ಥ**ವೂ ಇವೆ. ಈ ಪ್ರಕಾರ ಈ ನಾಲ್ಕೂ ತೀರ್ಥಗಳು ಪಾಜಕಕ್ಷೇತ್ರಕ್ಕೆ ತೀರ ಹತ್ತಿರವಾಗಿರುತ್ತವೆ. ಈ ನಾಲ್ಕು ತೀರ್ಥಗಳನ್ನು ಶ್ರೀಪರಶುರಾಮದೇವರು ನಿರ್ಮಿಸಿದ್ದರೂ, ಈ ತೀರ್ಥಗಳು ಪಾಜಕ ಕ್ಷೇತ್ರಕ್ಕೂ, ಉಡುಪಿಕ್ಷೇತ್ರಕ್ಕೂ ಅತಿ ಸಮೀಪವಾಗಿದ್ದರೂ ಶ್ರೀಮನ್ಮಧ್ವಾಚಾರ್ಯರು ಈ ನಾಲ್ಕು ತೀರ್ಥಗಳಲ್ಲಿ ಒಂದು ತೀರ್ಥದಲ್ಲಿಯೂ ಕೂಡ ತಮ್ಮ ಶಿಷ್ಯರಿಗೆ ಸನ್ಯಾಸಾಶ್ರಮವನ್ನು ಕೊಡದೆ, ಪಾಜಕ, ಉಡುಪಿ ಕ್ಷೇತ್ರಗಳಿಂದ ಬಹು ದೂರದಲ್ಲಿರುವ ಎಂದರೆ ಪಾಜಕಕ್ಷೇತ್ರದಿಂದ ೪೦ ಮೈಲುಗಳ ಮೇಲೆ ಹಾಗೂ ಉಡುಪಿ ಕ್ಷೇತ್ರದಿಂದ ೪೫ ಮೈಲುಗಳ ಮೇಲೆ ಇರುವ ಅರ್ಥಾತ್ ಅತಿಶಯದೂರವಾಗಿರುವ **ಕಾಣ್ವತೀರ್ಥ**ಕ್ಕೇನೇ ಹೋಗಿ, ಅಲ್ಲಿ ತಮ್ಮ ಶಿಷ್ಯರೆಲ್ಲರಿಗೆ ಸನ್ಯಾಸಾಶ್ರಮವನ್ನು ಕೊಟ್ಟಿದ್ದನ್ನು ನೋಡಿದರೆ, ಶ್ರೀಮನ್ಮಧ್ವಾಚಾರ್ಯರ ಹೃದಯದಲ್ಲಿ ಕಾಣ್ವತೀರ್ಥದ ಬಗ್ಗೆ ಅತ್ಯಂತ ಉತ್ಕಟವಾದ ಆತ್ಮೀಯ ಭಾವನೆಯು ಇತ್ತೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಮಥಿತಾರ್ಥವೇನೆಂದರೆ, ಶ್ರೀಮನ್ಮಧ್ವಾಚಾರ್ಯರು ಕಾಣ್ವತೀರ್ಥದ ಬಗ್ಗೆ ಅತ್ಯುತ್ಕಟವಾದ ಆತ್ಮೀಯ ಭಾವನೆಯನ್ನು ವ್ಯಕ್ತಪಡಿಸಿದ್ದರಿಂದ ಈ ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

(೬) ಶ್ರೀಮನ್ಮಧ್ವಾಚಾರ್ಯರು ಪೂರ್ವಾಶ್ರಮದಲ್ಲಿ ಎಂದರೆ ಬ್ರಹ್ಮಚರ್ಯಾಶ್ರಮದಲ್ಲಿ ತಮ್ಮ ಅತುಲವಾದ ತೇಜಸ್ವಿತೆಯನ್ನು ವ್ಯಕ್ತಮಾಡಿ, ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಉತ್ಕಟವಾದ ಇಚ್ಛೆಯನ್ನು ಪ್ರಕಟಿಸಲು, ಇದಕ್ಕೆ ತಾಯಿತಂದೆಗಳು ವಿರೋಧಮಾಡಿದರು. ಆಗ ಮಹಾತೇಜಸ್ವಿಯಾದ ಈ ಬಾಲಕನು (ಎಂದರೆ ವಾಸುದೇವನು) ತನ್ನ ಈ

ಪ್ರತಿಜ್ಞೆಯನ್ನು ಸಫಲ ಮಾಡಿಕೊಳ್ಳುವುದಕ್ಕೋಸ್ಕರ ದೃಢನಿಶ್ಚಯದಿಂದ ಬಹುಕಾಲ ಹೋರಾಡಿ, ಕಟ್ಟಕಡೆಗೆ ತಾನು ಸನ್ಯಾಸವನ್ನು ಸ್ವೀಕಾರ ಮಾಡುವುದಕ್ಕೆ ತನ್ನ ತಾಯಿತಂದೆಗಳಿಂದ ಅನುಜ್ಞೆಯನ್ನು ಪಡೆದು ಕೊಂಡು ಬರಲು, ತತ್ಕಾಲೀನ ಇವನ ಆಪ್ತರು ಇಷ್ಟರು ಮೊದಲಾದ ಸಮಸ್ತ ಅದ್ವೈತ ಮತಸ್ಥರಲ್ಲಿ ಪ್ರತಿಯೊಬ್ಬ ಬ್ರಾಹ್ಮಣನ ಮುಖದಿಂದ– "ಇಂಥ ಕಠಿಣತರವಾದ ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಇಷ್ಟು ದೃಢನಿಶ್ಚಯದಿಂದ ಹೋರಾಡಿ, ತಾಯಿತಂದೆಗಳಿಂದ ಆಜ್ಞೆಯನ್ನು ಪಡೆದಂಥ ಈ ಧೀರ ವೈರಾಗ್ಯಶಾಲಿಯಾದ ವಾಸುದೇವನು ಸಾಮಾನ್ಯ ಬಾಲಕನಲ್ಲ! ಲೋಕೋತ್ತರನಾಗಿದ್ದಾನೆ. **ಕಾಣ್ವಶಾಖೆಯ** ಬ್ರಾಹ್ಮಣರಲ್ಲಿ ಅವತರಿಸಿದಂಥ, ಶೃಂಗೇರಿಮಠದ ಆದ್ಯ ಜಗದ್ಗುರುಗಳಾದಂಥ ಶ್ರೀಸುರೇಶ್ವರಾಚಾರ್ಯರೇ ಈ ವಾಸುದೇವನ ರೂಪದಿಂದ ಪುನಃ ಕಾಣ್ವಶಾಖೆಯ ಬ್ರಾಹ್ಮಣರಲ್ಲಿಯೇ ಅವತರಿಸಿ ಬಂದಿದ್ದಾರೆ!!" ಎಂಬ ಉದ್ಗಾರಗಳು ಹೊರಟವೆಂಬುದನ್ನು ವ್ಯಂಗ್ಯೋಕ್ತಿಯಿಂದ ಹೇಳುವುದಕ್ಕಾಗಿಯೇ ಸುಮಧ್ವವಿಜಯಕಾರರು ಈ ಸಮಯವನ್ನು ನಿರೂಪಿಸುವಾಗ್ಗೆ ಮಾತ್ರ ಈ ವಾಸುದೇವನನ್ನು '**ಜಗದ್ಗುರುಃ ಸುರೇಶ್ವರಃ**' ಎಂದು **ಕಂಠೋಕ್ತವಾಗಿ** ಸಂಬೋಧಿಸಿದ್ದಾರೆ. (ಸುಮಧ್ವವಿಜಯ ೪-೩೦) ಅತಏವ ಶ್ರೀಮನ್ಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಅವತರಿಸಿದ್ದಾರೆಂಬುದು ಸಿದ್ಧ.

(೭) ಕಾಣ್ವಶಾಖೆಯ ಸಂಹಿತೆಯ ಋಷಿ, ದೇವತಾ, ಛಂದಸ್ಸು, ವಿನಿಯೋಗಗಳನ್ನು ಹೇಳುವಾಗ್ಗೆ– "ಶುಕ್ಲಯಜುರ್ವೇದಸ್ಯ **ವಾಯು** ರೃಷಿಃ **ವಾಯು**ರ್ದೇವತಾ, ತ್ರಿಷ್ಟುಪ್ ಛನ್ದಃ, ಸಂಹಿತಾಧ್ಯಯನೇ ವಿನಿಯೋಗಃ" ಎಂದೆನ್ನುವ ಸಂಪ್ರದಾಯವು, ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ವೇದಕಾಲದಿಂದಲೂ ಪರಂಪರಾಗತವಾಗಿ ಬಂದಿದೆ. ಕಾಣ್ವಶಾಖೆಯ ಶುಕ್ಲ ಯಜುರ್ವೇದದ ಎಂದರೆ ಕಾಣ್ವಸಂಹಿತೆಯ ಋಷಿಯೂ ವಾಯು; ದೇವತೆಯೂ ವಾಯು. ಅರ್ಥಾತ್ **ಕಾಣ್ವಶಾಖೆಯ ಸಂಹಿತೆಯಲ್ಲಿ ವಾಯುದೇವರಿಗೆ ಪ್ರಾಧಾನ್ಯವಿದ್ದುದರಿಂದಲೂ** ಮತ್ತು "**ಪ್ರಾಧಾನ್ಯೇನ ವ್ಯಪದೇಶಾ ಭವನ್ತಿ**" ಎಂದು ಪದ್ಧತಿಯಿದ್ದುದರಿಂದಲೂ ಹಾಗೂ ಇದ

ಕ್ಕನುಸರಿಸಿಯೇ ತತ್ಕಾಲೀನ ಪಂಡಿತರು- " ಈ ವಾಯುದೇವರೇ ಮಧ್ವಾಚಾರ್ಯರಾಗಿ ಅವತರಿಸಿದ್ದಾರೆಂ"ದು ಹೇಳಿದ್ದರಿಂದಲೂ[1] ಈ ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಅವತರಿಸಿದ್ದಾರೆಂಬುದು ಸಿದ್ಧ.

(೮) ಋಗ್ವೇದ ಸಂಹಿತೆಯ ೧ನೆಯ ಮಂಡಲದ ೧೪೧ನೆಯ ಸೂಕ್ತದಲ್ಲಿ ಎಂದರೆ ಬಳಿತ್ಥಾ ಸೂಕ್ತದಲ್ಲಿ- ಮಧ್ವನು ಮಾತರಿಶ್ವನಿಂದ ಅಭಿನ್ನನೆಂಬುದು, ಎಂದರೆ ಮಧ್ವ, ಮಾತರಿಶ್ವ ಇವೆರಡೂ ನಾಮಗಳು ಒಬ್ಬನಿಗೇನೇ ಅನ್ವಯಿಸುತ್ತವೆಂಬುದು ಸ್ಪಷ್ಟವಾಗಿ ವ್ಯಕ್ತವಾದುದರಿಂದಲೂ ಮತ್ತು ಇದೇ ಋಗ್ವೇದ ಸಂಹಿತೆಯ ೮ನೆಯ ಮಂಡಲದ **೫೪ನೆಯ** ಸೂಕ್ತದ ಋಷಿಯಾದ **ಮಾತರಿಶ್ವನು ಕಾಣ್ವಋಷಿಯೆಂದು** ಆ ಸೂಕ್ತದ ಆರಂಭದಲ್ಲಿ ಕಂಠೋಕ್ತವಾಗಿ ಹೇಳಿದ್ದರಿಂದಲೂ ಹಾಗೂ ಇದಕ್ಕನುಸರಿಯೇ ತತ್ಕಾಲೀನ ಪಂಡಿತರು-ಶ್ರೀಮದಾನಂದತೀರ್ಥರನ್ನು **ಮಾತರಿಶ್ವ**ನದೇ ಮತ್ತೊಂದು ಹೆಸರಾದ 'ಮಧ್ವ' ಎಂಬ ನಾಮದಿಂದ ಸಂಬೋಧಿಸಿದ್ದರಿಂದಲೂ ಈ ಶ್ರೀಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರಲ್ಲಿ ಅವತರಿಸಿದ್ದಾರೆಂಬುದು ಸಿದ್ಧ.

ಇಷ್ಟೆಲ್ಲ ವಿವರಣೆಯ ಫಲಿತಾರ್ಥವೇನೆಂದರೆ, ಇದು ವರೆಗೆ ವಿವೇಚಿಸಿದ ಬಲವತ್ತರವಾದ ನಾಲ್ಕು ಆಂತರ ಪ್ರಮಾಣಗಳೂ ನಾಲ್ಕು ಬಾಹ್ಯ ಪ್ರಮಾಣಗಳೂ ಪರಸ್ಪರ ಒಂದಕ್ಕೊಂದು ಪೋಷಕವಾಗಿದ್ದು, ಇವು ಎಂಟೂ ಬಲವತ್ತರವಾದ ಪ್ರಮಾಣಗಳಿಂದ ಶ್ರೀಮನ್ಮಧ್ವಾಚಾರ್ಯರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿ ಸಿದ್ಧವಾಯಿತು.

---

೧ ಲೋಕೋತ್ತರವಾದ ಸದ್ಗುಣಗಳಿಂದ ಯುಕ್ತರಾದವರನ್ನು ನೋಡಿ, ಇವರನ್ನು ದೇವಾಂಶರೆಂದು ಭಾವಿಸಿ, ಈ ಮಹಾಭಾಗರ ಪೂರ್ವಪರಂಪರೆಗೆ ಅನುಸರಿಸಿ, ಇಂಥ ದೇವರ ಅವತಾರವೆಂದು ಈ ಪುಣ್ಯಶ್ಲೋಕರಿಗೆ ತತ್ಕಾಲೀನ ಪಂಡಿತರು ನಾಮಕರಣ ಮಾಡುವ ಸಂಪ್ರದಾಯವು ನಮ್ಮ ಭಾರತೀಯರಲ್ಲಿ ಸಕಲ ಮತಸ್ಥರಲ್ಲಿಯೂ ಪ್ರಾಚೀನಕಾಲದಿಂದಲೂ ಪರಂಪರಾಗತವಾಗಿ ಬಂದಿದೆ.

# ಶ್ರೀಮಜ್ಜಯತೀರ್ಥರ ಶಾಖಾನಿರ್ಣಯ



ಶ್ರೀಮಜ್ಜಯತೀರ್ಥರು ಶ್ರೀಮನ್ಮಾಧ್ವ ಭಾಷ್ಯಗ್ರಂಥಗಳಿಗೆಲ್ಲ ಟೀಕೆಯನ್ನು ಬರೆದಿರುವುದರಿಂದ ಇವರಿಗೆ ಶ್ರೀಮಟ್ಟೀಕಾಕೃತ್ಪಾದಾಚಾರ್ಯರೆಂಬ ಹೆಸರು ಪ್ರಾಪ್ತವಾಗಿದೆ. ಈ ಶ್ರೀಮಟ್ಟೀಕಾಚಾರ್ಯರ ಶಾಖಾನಿರ್ಣಯವನ್ನು ಮಾಡುವುದಕ್ಕೆ ಉಪಕ್ರಮಿಸುವಾ.

(ಆಂತರ ಪ್ರಮಾಣಗಳು)

(೧) ಶ್ರೀಮಜ್ಜಯತೀರ್ಥರು, ಈಶಾವಾಸ್ಯೋಪನಿಷದ್ಭಾಷ್ಯಕ್ಕೆ ಟೀಕೆಯನ್ನು ಬರೆಯುವಾಗ್ಗೆ ಉಪಕ್ರಮದಲ್ಲಿ– "**ಕಾಣ್ವೀಂ ಮಂತ್ರೋಪನಿಷದಂ** ಯಥಾವದ್ವ್ಯಾಕರಿಷ್ಯನ್ ಭಗವಾನಾಚಾರ್ಯಃ ಚಿಕೀರ್ಷಿತಾವಿಘ್ನಪರಿಸಮಾಪ್ತ್ಯಾದಿ ಪ್ರಯೋಜನೇ ತತ್ಪ್ರತಿಪಾದ್ಯದೇವತಾ ಸ್ತುತಿನತೀ ಪ್ರಥಮಂ ನಿಬಧ್ನಾತಿ" ೧ ಎಂದು ಹೇಳಿದ್ದಾರೆ. ಈ ಆಂತರ ಪ್ರಮಾಣಕ್ಕೆ ಚೆನ್ನಾಗಿ ಅನ್ವಯಿಸುತ್ತಿದ್ದ ಉಪಕ್ರಮ ಹಾಗೂ ಅಪೂರ್ವತಾ ಎಂಬೆರಡು ಗಮಕಗಳಿಂದ ಶ್ರೀಮಜ್ಜಯತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರೆಂದು ನಿಷ್ಪನ್ನವಾಗುತ್ತದೆ. ಅದು ಹೇಗೆಂದರೆ:–

'ಉಪಕ್ರಮ'

ಪ್ರತಿಯೊಬ್ಬ ಗ್ರಂಥಕಾರನು ತನ್ನ ಮನಸ್ಸಿನಲ್ಲಿ ಯಾವುದಾದರೊಂದು ವಿಶಿಷ್ಟವಾದ ಹೇತುವನ್ನು ಇಟ್ಟುಕೊಂಡು, ಗ್ರಂಥವನ್ನು ಬರೆಯುವುದಕ್ಕೆ ಪ್ರಾರಂಭಮಾಡುತ್ತಾನೆ. ಮತ್ತು ತನ್ನ ಆ ವಿಶಿಷ್ಟವಾದ ಉದ್ದೇಶವನ್ನು ಆತನು ಉಪಕ್ರಮದಲ್ಲಿ ಎಂದರೆ ಗ್ರಂಥಾರಂಭದಲ್ಲಿ ವ್ಯಕ್ತಪಡಿಸುತ್ತಾನೆ. ಆದ್ದರಿಂದ ವಿಮಾಂಸಕರು, ಗ್ರಂಥಕಾರನ ಉದ್ದೇಶವನ್ನು ತಿಳಿದುಕೊಳ್ಳು

---

೧ ಕಾಣ್ವಶಾಖೆಯ ಉಪನಿಷತ್ತಾದ ಈಶಾವಾಸ್ಯೋಪನಿಷತ್ತಿನ ಯಥಾರ್ಥವಾದ ಸ್ಪಷ್ಟೀಕರಣಮಾಡುವ ಇಚ್ಛೆಯನ್ನು ಧಾರಣಮಾಡಿ, ಭಗವಾನ್ ಶ್ರೀಮನ್ಮಧ್ವಾಚಾರ್ಯರು ಇಷ್ಟಫಲದ ಸಿದ್ಧಿಗೋಸ್ಕರವಾಗಿಯೂ ನಿರ್ವಿಘ್ನತೆಯ ಪ್ರಾಪ್ತಿಗೋಸ್ಕರವಾಗಿಯೂ ಈ ಉಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟಂಥ ದೇವತೆಯನ್ನು ಕುರಿತು ಸ್ತುತಿಸಿ ನಮಸ್ಕಾರ ಮಾಡುತ್ತಾರೆ.

ವುದಕ್ಕೆ ಉಪಕ್ರಮವು ಒಂದು ಲಿಂಗವಾಗಿರುತ್ತದೆಂದು ಎಂದರೆ ಗಮಕವಾಗಿರುತ್ತದೆಂದು ಹೇಳಿದ್ದಾರೆ. ಶ್ರೀಮಜ್ಜಯತೀರ್ಥರು, ಈಶಾವಾಸ್ಯೋಪನಿಷದ್ಭಾಷ್ಯಕ್ಕೆ ತಾವು ಬರೆದ **ಟೀಕೆಯ** ಉಪಕ್ರಮದಲ್ಲಿ–ಈಶಾವಾಸ್ಯೋಪನಿಷತ್ತನ್ನು ಕಾಣ್ವೋಪನಿಷತ್ತೆಂದು ಸಂಬೋಧಿಸಿ, ಕಾಣ್ವಶಾಖೆಯನ್ನು ಗೌರವಿಸಿದ್ದಾರೆ. ತ್ರಿಮತಸ್ಥ ಭಾಷ್ಯಕಾರರಲ್ಲಿಯಾಗಲಿ ಟೀಕಾಕಾರರಲ್ಲಿಯಾಗಲಿ ಈ ಈಶಾವಾಸ್ಯೋಪನಿಷತ್ತು ಕಾಣ್ವಶಾಖೆಯ ಉಪನಿಷತ್ತೆಂದು ಕಂಠೋಕ್ತವಾಗಿ ಮೊಟ್ಟಮೊದಲು ಹೇಳಿದವರೆಂದರೆ ಈ ಜಯತೀರ್ಥರೇ ಸರಿ. ಅರ್ಥಾತ್ ಇವರು ಕಾಣ್ವಶಾಖೆಯ ಬಗ್ಗೆ ಗೌರವ ಪುರಸ್ಸರವಾಗಿ ಆತ್ಮೀಯ ಭಾವನೆಯನ್ನು ಎಂದರೆ ಸ್ವಶಾಖಾಭಿಮಾನವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆಂಬುದು ಇದರಿಂದ ಸ್ಪಷ್ಟವಾಯಿತು. ಆತಏವ ಈ ಪ್ರಕಾರ ಉಪಕ್ರಮದಲ್ಲಿ ಕಾಣ್ವಶಾಖಾಭಿಮಾನವನ್ನು ವ್ಯಕ್ತಪಡಿಸಿದ್ದರಿಂದ ಶ್ರೀಮಜ್ಜಯತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

**"ಅಪೂರ್ವತಾ"**

ಅಪೂರ್ವತಾ ಎಂದರೆ ನವೀನತನವು. ಈ ಶ್ರೀಮಜ್ಜಯತೀರ್ಥರು ಈಶಾವಾಸ್ಯೋಪನಿಷದ್ಭಾಷ್ಯಕ್ಕೂ ಹಾಗೂ ಷಟ್ಪ್ರಶ್ನೋಪನಿಷದ್ಭಾಷ್ಯಕ್ಕೂ ಟೀಕೆಯನ್ನು ಬರೆದಿದ್ದು, ಇವೆರಡರಲ್ಲಿ ಈಶಾವಾಸ್ಯೋಪನಿಷದ್ಭಾಷ್ಯ ಟೀಕೆಯೊಂದರಲ್ಲಿಯೇ ಮಾತ್ರ ಈಶಾವಾಸ್ಯೋಪನಿಷತ್ತು ಕಾಣ್ವಶಾಖೆಯ ಉಪನಿಷತ್ತೆಂದು ಕಂಠೋಕ್ತವಾಗಿ ಹೇಳಿ, ಈ ಉಪನಿಷತ್ತಿನ **ಕಾಣ್ವಶಾಖೆ**ಯನ್ನು ಗೌರವಿಸಿದ್ದಾರೆಯೇ ಹೊರತು ಮಿಕ್ಕ ಷಟ್ಪ್ರಶ್ನೋಪನಿಷದ್ಭಾಷ್ಯ ಟೀಕೆಯಲ್ಲಿ ಆ ಉಪನಿಷತ್ತಿನ **ಪಿಪ್ಪಲಾದ ಶಾಖೆ**ಯನ್ನು ಗೌರವಿಸುವ ಗೋಜಿಗೇನೇ ಹೋಗಿಲ್ಲ. ಅರ್ಥಾತ್ ಆ ಉಪನಿಷತ್ತಿನ ಪಿಪ್ಪಲಾದ ಶಾಖೆಯನ್ನು ಉಲ್ಲೇಖಮಾಡಿರುವುದಿಲ್ಲ. ಆತಏವ ಈಶಾವಾಸ್ಯೋಪನಿಷದ್ಭಾಷ್ಯ ಟೀಕೆಯೊಂದರಲ್ಲಿಯೇ ಮಾತ್ರ "**ಕಾಣ್ವೀಂ ಮಂತ್ರೋಪನಿಷದಂ**" ಎಂದು ಈ ಉಪನಿಷತ್ತಿನ ಕಾಣ್ವಶಾಖೆಯನ್ನು ಉಲ್ಲೇಖಮಾಡಿರುವುದು ಅಪೂರ್ವತೆಯೇ ಸರಿ. ಈ ಪ್ರಕಾರ ಶ್ರೀಮಜ್ಜಯತೀರ್ಥರು ಅಪೂರ್ವತೆಯಿಂದ ಕಾಣ್ವಶಾಖೆಯನ್ನು ಗೌರವಿಸಿರುವುದರಿಂದ ಈ ಶ್ರೀಜಯತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

(೨) " **ಸ್ಥಾನಂ ಸಮಾಖ್ಯಾತಃ ಪ್ರಬಲಮ್** " ಎಂದರೆ ಯೌಗಿಕ ಅರ್ಥಕ್ಕಿಂತಲೂ **ಸ್ಥಾನದಿಂದ** ಪ್ರಾಪ್ತವಾದ ರೂಢಾರ್ಥವು ಬಲವತ್ತರವಾಗಿರುತ್ತದೆ. " ಎಂದು ಮೀಮಾಂಸಕರ ಸಿದ್ಧಾಂತವಿದೆ. ಈ ಸಿದ್ಧಾಂತಕ್ಕನುಸರಿಸಿ, ಶ್ರೀಜಯತೀರ್ಥರು ತಾವು ಬರೆದ ಈಶಾವಾಸ್ಯೋಪನಿಷದ್ಭಾಷ್ಯಟೀಕೆಯ ಮಂಗಲಾಚರಣದಲ್ಲಿ ಶ್ರೀಪರಮಾತ್ಮನನ್ನು ಸ್ತುತಿಸಿದ ಬಳಿಕ **ಗುರುಸ್ತುತಿಯನ್ನು ಮಾಡುವ ಸ್ಥಾನದಲ್ಲಿ** ಈಶಾವಾಸ್ಯೋಪನಿಷತ್ತನ್ನು ಕಾಣ್ವೋಪನಿಷತ್ತೆಂದು ಸಂಬೋಧಿಸಿದ್ದಾರೆ. ಸ್ಥಾನದಿಂದ ಪ್ರಾಪ್ತವಾಗತಕ್ಕ ಇದರ ಧ್ವನಿತಾರ್ಥವೇನೆಂದರೆ, ಶ್ರೀಮಜ್ಜಯತೀರ್ಥರು ಕಾಣ್ವಶಾಖೆಯ ಬಗ್ಗೆ ಅರ್ಥಾತ್ ಕಾಣ್ವಶಾಖೆಯ ಪ್ರವರ್ತಕರಾದ ಕಣ್ವಋಷಿಗಳ ಬಗ್ಗೆ ಗುರುಭಾವನೆಯನ್ನು ಪ್ರಕಟಮಾಡಿ, ಈ ಪ್ರಕಾರ ವ್ಯಂಗ್ಯೋಕ್ತಿಯಿಂದ ತಾವು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆಂದು ಇತ್ಯರ್ಥ. ಇದೇ ನೇರೆಗೆ ಕಾಣ್ವಶಾಖೆಯ ಬ್ರಾಹ್ಮಣರಾದ ಶ್ರೀ ಸುರೇಶ್ವರಾಚಾರ್ಯರೂ ಶ್ರೀಮಧ್ವಾಚಾರ್ಯರೂ ಅನುಕ್ರಮವಾಗಿ ಬೃಹದಾರಣ್ಯಕೋಪನಿಷದ್ಭಾಷ್ಯವಾರ್ತಿಕದಲ್ಲಿಯೂ, ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿಯೂ ಗುರುಸ್ತುತಿಯನ್ನು ಮಾಡುವ ಸ್ಥಾನದಲ್ಲಿ ಈ ಉಪನಿಷತ್ತಿನ ಕಾಣ್ವಶಾಖೆಯ ನಾಮೋಲ್ಲೇಖವನ್ನು ಮಾಡಿ, ತಾವು ಕಾಣ್ವಶಾಖೆಯ ಬ್ರಾಹ್ಮಣರೆಂಬುದನ್ನು ಈ ರೀತಿ ವ್ಯಂಗ್ಯೋಕ್ತಿಯಿಂದ ಸುಂದರವಾಗಿ ಧ್ವನಿತಮಾಡಿದ್ದಾರೆ. ಇತ್ಯರ್ಥವೇನೆಂದರೆ, ಶ್ರೀಜಯತೀರ್ಥರು ಶ್ರೀಸುರೇಶ್ವರಾಚಾರ್ಯ, ಶ್ರೀಮಧ್ವಾಚಾರ್ಯರಂತೆಯೇ ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಇಷ್ಟೆಲ್ಲ ವಿವರಣೆಯ ಫಲಿತಾರ್ಥವೇನೆಂದರೆ, ಶ್ರೀಜಯತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರೆಂಬುದು ಸಿದ್ಧ.

(ಬಾಹ್ಯ ಪ್ರಮಾಣವು)

ಶ್ರೀಮಜ್ಜಯತೀರ್ಥರು ಗ್ರಂಥಗಳನ್ನು ಬರೆಯುತ್ತ ಕುಳಿತುಕೊಂಡಿದ್ದ ಸ್ಥಳವೆಂದು ಜಯತೀರ್ಥವಿಜಯ ಗ್ರಂಥದಲ್ಲಿ ವರ್ಣಿತವಾದ **ಯರಗೋಳ ಗ್ರಾಮದ ಗುಹೆಯಿಂದ ಪಶ್ಚಿಮಕ್ಕೆ ೧೨ ಮೈಲುಗಳ ಮೇಲೆ ಭೀಮಾನದಿಯ ತೀರದಲ್ಲಿದ್ದ ಹುರಸಗುಂಡಿಗಿ ಗ್ರಾಮದಲ್ಲಿರುವವರೂ**

ಹಾಗೂ **ಶ್ರೀಜಯತೀರ್ಥರ ವಂಶಜರೂ** ಆದ ಶ್ರೀಮಾನ್ ಶಿವರಾಮ ಪಂತ ನಾಡಗೌಡರೆಂಬುವರು[೧] **ಕಾಣ್ವಶಾಖೆಯ ಮಾಧ್ವಬ್ರಾಹ್ಮಣರೇ** ಆಗಿದ್ದಾರೆ ಅರ್ಥಾತ್ ಮೇಲೆ ನಿರೂಪಿತವಾದ ಆಂತರ ಪ್ರಮಾಣಗಳು ಹಾಗೂ **ಈ** ಬಾಹ್ಯಪ್ರಮಾಣವು ಪರಸ್ಪರ ಒಂದನ್ನೊಂದು ಪೋಷಿಸುತ್ತವೆ. ಇಷ್ಟೆಲ್ಲ ವಿವರಣೆಯ ಫಲಿತಾರ್ಥವೇನೆಂದರೆ, ಮೇಲೆ ಉಕ್ತವಾದ ಆಂತರ ಪ್ರಮಾಣಗಳಿಂದ ನಿರ್ಣಯಿಸಲ್ಪಟ್ಟ "ಶ್ರೀಮಜ್ಜಯತೀರ್ಥರು ಕಾಣ್ವಶಾಖೆಯ ಬ್ರಾಹ್ಮಣರು." ಎಂಬ ಸಿದ್ಧಾಂತವು ಐತಿಹಾಸಿಕ ಸತ್ಯವೆಂಬುದು ಈ ಬಾಹ್ಯಪ್ರಮಾಣದಿಂದ ಮತ್ತಿಷ್ಟು ಸ್ಪಷ್ಟವಾಯಿತು.

---

೧ ಈ ನಾಡಗೌಡ ಶಿವರಾಮಪಂತರ ಮನೆತನದ ಐತಿಹ್ಯವನ್ನು 'ಶ್ರೀಮಜ್ಜಯತೀರ್ಥರ ಸ್ಥಳನಿರ್ಣಯ" ಎಂಬ ೩ನೆಯ ಪರಿಶಿಷ್ಟದಲ್ಲಿ ವಿಸ್ತಾರವಾಗಿ ಹೇಳಿದ್ದೇವೆ; ಅಲ್ಲಿ ನೋಡಿರಿ.

## ೩ನೆಯ ಪರಿಶಿಷ್ಟ

## ಶ್ರೀಮನ್ಮಧ್ವಾಚಾರ್ಯರ ಪೂರ್ವಜರ ಸ್ಥಳನಿರ್ಣಯ

ಮತ್ತು

## ಶ್ರೀಮಜ್ಜಯತೀರ್ಥರ ಸ್ಥಳನಿರ್ಣಯ



ಬನವಾಸಿಯ ಕದಂಬವಂಶದ ರಾಜನಾದ ಮುಕ್ಕಣ್ಣನು, ಉತ್ತರ ಹಿಂದುಸ್ಥಾನದಲ್ಲಿಯ ರೋಹಿಲ ಖಂಡದಲ್ಲಿರುವ **ಅಹಿಚ್ಛತ್ರ**ನೆಂಬ ಅಗ್ರಹಾರದಿಂದ ೩೨ ಜನ ಬ್ರಾಹ್ಮಣರನ್ನು ಕುಟುಂಬಸಹಿತವಾಗಿ ಕರೆದುಕೊಂಡು ಬಂದು, ತಾಳಗುಂದದಲ್ಲಿ ಅವರಿಗೆ ಅಗ್ರಹಾರವನ್ನು ಏರ್ಪಡಿಸಿಕೊಟ್ಟನೆಂದು ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರ ತಾಲೂಕಿನ ೧೮೬ನೆಯ ಶಾಸನದಲ್ಲಿ ಉಕ್ತವಾಗಿದೆ. ಇದೇ ಮೇರೆಗೆ ಕದಂಬರಾಜನಾದ ಮಯೂರವರ್ಮನು ಉತ್ತರ ಹಿಂದುಸ್ಥಾನದಲ್ಲಿದ್ದ ಇದೇ ಅಹಿಚ್ಛತ್ರವೆಂಬ ಅಗ್ರಹಾರದಿಂದ ಶಿವಳ್ಳಿ ಬ್ರಾಹ್ಮಣರನ್ನೂ ಹವ್ಯಕ ಬ್ರಾಹ್ಮಣರನ್ನೂ ಕರೆತರಿಸಿ, ತುಳುನಾಡಿನಲ್ಲಿಯೂ ಹೈಗನಾಡಿನಲ್ಲಿಯೂ ಇವರನ್ನು ನೆಲೆಯಾಗಿ ನಿಲ್ಲಿಸಿದನೆಂದು ಇವೆರಡೂ ಪಂಗಡಗಳ ಬ್ರಾಹ್ಮಣರು ತಮ್ಮ ತಮ್ಮ ಗ್ರಂಥಗಳಲ್ಲಿ ಕಂಠೋಕ್ತವಾಗಿ ಹೇಳಿಕೊಂಡಿದ್ದಾರೆ. ಇದೇ ಪ್ರಕಾರ ಹೊಯ್ಸಳ ಯಾದವವಂಶದ ರಾಜನಾದ ೧ನೆಯ ನಾರಸಿಂಹನು (ಕ್ರಿ. ಶ. ೧೧೪೧–೧೧೭೩) ಶ್ರೀಮನ್ಮಧ್ವಾಚಾರ್ಯರ ತಂದೆಯವರಾದ ಮಧ್ಯಗೇಹಭಟ್ಟರನ್ನು ಮೈಸೂರು ದೇಶದಿಂದ ಎಂದರೆ ತನ್ನ ರಾಜಧಾನಿಯಾದ ಬೇಲೂರಿನಿಂದ ತುಳುನಾಡಿಗೆ ಕುಟುಂಬ ಸಹಿತವಾಗಿ ಕರೆದುಕೊಂಡು ಬಂದು, ಅವರನ್ನು ಇಲ್ಲಿ ನೆಲೆಯಾಗಿ ನಿಲ್ಲಿಸಿದನೆಂಬುದನ್ನು ಸಪ್ರಮಾಣವಾಗಿ ಸಿದ್ಧಪಡಿಸುವುದೇ ಪ್ರಸ್ತುತ ನಮ್ಮ ಕರ್ತವ್ಯವಾಗಿದೆ.

### ಶ್ರೀಮನ್ಮಧ್ವಾಚಾರ್ಯರ ಪೂರ್ವಜರ ಸ್ಥಳನಿರ್ಣಯ

ಉಡುಪಿಪ್ರಾಂತವನ್ನು ಎಂದರೆ ಬಾರ್ಕೂರಿನ ವರೆಗಿನ ತುಳುನಾಡನ್ನು ಮಧ್ಯಗೇಹಭಟ್ಟರ ಕಾಲದಲ್ಲಿ, ಹೊಯ್ಸಳಯಾದವ ರಾಜರಾದ ವಿಷ್ಣುವರ್ಧನನೂ ಆತನ ಮಗನಾದ ೧ನೆಯ ನಾರಸಿಂಹನೂ ಮೊಮ್ಮಗನಾದ

೧ನೆಯ ವೀರಬಲ್ಲಾಳನೂ ಅನುಕ್ರಮದಿಂದ ಆಳಿದರು. ಈ ಬಾರ್ಕೂರು ಉಡುಪಿಯಿಂದ ಉತ್ತರಕ್ಕೆ ಒಂಬತ್ತು ಮೈಲುಗಳ ಮೇಲೆ ಇದೆ. ಹೊಯ್ಸಳ ಯಾದವರಾಜರು ಈ ಬಾರ್ಕೂರಿನ ವರೆಗೆ ತುಳುನಾಡನ್ನು ಎಂದರೆ ಉಡುಪಿ ಪ್ರಾಂತವನ್ನು ವಿಷ್ಣುವರ್ಧನನ ಕಾಲದಿಂದ ಆಳಲಾರಂಭಿಸಿದರೆಂದು ಶಿಲಾಶಾಸನಗಳು ಘಂಟಾಘೋಷವಾಗಿ ಹೇಳುತ್ತವೆ.[೧] ಈ ವಿಷ್ಣುವರ್ಧನನ ಮಗನಾದ ೧ನೆಯ ನಾರಸಿಂಹನು ಬೇಲೂರು ಮತ್ತು ಹಳೇಬೀಡ ರಾಜಧಾನಿಗಳಲ್ಲಿ ಕ್ರಿ. ವ. ೧೧೪೧ ರಿಂದ ೧೧೭೩ರ ವರೆಗೆ ರಾಜ್ಯವನ್ನಾಳುತ್ತಿರುವಾಗ್ಗೆ, ಈ ರಾಜನಿಗೆ **ಕಾಣ್ವಶಾಖೆಯ** ಬ್ರಾಹ್ಮಣನಾದ ಲಕುಮಯ್ಯನೆಂಬುವನು ಅರ್ಥಾತ್ ಲಕ್ಷ್ಮಯ್ಯನೆಂಬುವನು ಮುಖ್ಯ ಮಂತ್ರಿಯಾಗಿದ್ದನೆಂದು ಹಾಸನ ಜಿಲ್ಲೆಯ ಹಾಸನ ತಾಲೂಕಿನ ೬೬ನೆಯ ಶಾಸನವು ಸ್ಪಷ್ಟವಾಗಿ ಹೇಳುತ್ತದೆ.[೨] ಈ ೧ನೆಯ ನಾರಸಿಂಹ ರಾಜನು ಮೈಸೂರು ದೇಶದಿಂದ (ಅರ್ಥಾತ್ ಬೇಲೂರು ರಾಜಧಾನಿಯಿಂದ) ಅನೇಕಮಂದಿ ಬ್ರಾಹ್ಮಣರನ್ನು ಕುಟುಂಬ ಸಹಿತ ಕರೆತಂದು, ತುಳುನಾಡಿನಲ್ಲಿ ನಿಲ್ಲಿಸಿದನೆಂದು ಶ್ರೀಮಾನ್ ಎನ್. ಗಣಪತಿರಾವ್ ಐಗಳ್ ಇವರು ತಾವು ಬರೆದ "ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ" ಎಂಬ ಗ್ರಂಥದಲ್ಲಿ (೧೦೭ನೆಯ ಪುಟದಲ್ಲಿ) ಹೇಳಿಯೇ ಇದ್ದಾರೆ. ಈ

---

೧ ಹಾಸನ ಜಿಲ್ಲೆಯ ಹಾಸನ ತಾಲೂಕಿನ ೬೫, ೮೯, ೯೦, ೧೧೬ನೆಯ ಶಾಸನಗಳೂ, ಬೇಲೂರ ತಾಲೂಕಿನ ೫೮, ೭೧, ೭೫, ೧೧೭, ೧೪೭ ನೆಯ ಶಾಸನಗಳೂ ಹಾಗೂ ಕಡೂರು ಜಿಲ್ಲೆಯ ಕಡೂರು ತಾಲೂಕಿನ ೭೭, ೭೯, ೧೦೨, ೧೦೪ನೆಯ ಶಾಸನಗಳೂ ವಿಷ್ಣುವರ್ಧನನು ಬಾರ್ಕೂರಿನ ವರೆಗೆ ತುಳುನಾಡನ್ನು ಆಳುತ್ತಿದ್ದನೆಂದು ಕಂಠೋಕ್ತವಾಗಿ ಹೇಳುತ್ತವೆ. ಇದೇ ಮೇರೆಗೆ ವಿಷ್ಣುವರ್ಧನನ ಮೊಮ್ಮಗನಾದ ವೀರಬಲ್ಲಾಳನೂ ಬಾರ್ಕೂರಿನ ವರೆಗೆ ತುಳುನಾಡನ್ನು ಆಳುತ್ತಿದ್ದನೆಂದು ಚಿಕ್ಕಮಗಳೂರು ತಾಲೂಕಿನ ೨೧, ೨೨ನೆಯ ಶಾಸನಗಳು ಹೇಳುತ್ತವೆ.

೨ 'ಸ್ವಸ್ತಿ ಸಮಸ್ತಶೀಲಗುಣಸಂಪನ್ನನುಂ ಕಾಣ್ವವಂಶೋದ್ಭವನುಂ ನಾಗದೇವ–ನಾಯಕ ಪ್ರಿಯತನೂಭವನುಂ ಕಾಶ್ಯಪಗೋತ್ರಪವಿತ್ರನುಂ ಪುರುಷೋತ್ತಮಾರಾಧನ ಪ್ರಸಾದಾಸಾದಿತ ಮಹದೈಶ್ವರ್ಯನುಂ ಅಸಹಾಯ್ಯ ಶೌರ್ಯನುಂ ಅವಾರ್ಯ ವೀರ್ಯನುಂ ಅಪ್ಪ ಶ್ರೀಮನ್ಮಹಾಪ್ರಧಾನಂ ಹೆಗ್ಗಡೆ ಲಕುಮಯ್ಯಂ ಪೊಯ್ಸಳ ನಾರಸಿಂಹದೇವಂಗೆ ರಾಜ್ಯಮಂ ನಿಷ್ಕಂಟಕಂ ಮಾಡಿ ಪ್ರತಿಷ್ಠಾಪಿಸಿ,'

(ಹಾಸನ ಜಿಲ್ಲೆಯ ಹಾಸನ ತಾಲೂಕಿನ ೬೬ನೆಯ ಶಾಸನ)

ಬ್ರಾಹ್ಮಣರಲ್ಲಿ ಬಹುಮಂದಿ ಕಿಂಬಹುನಾ ಎಲ್ಲರೂ ಕಾಣ್ವಶಾಖೆಯ ಬ್ರಾಹ್ಮಣರು ಇರುವುದು ಅಪರಿಹಾರ್ಯವಾಗಿದೆ. ಏಕೆಂದರೆ, ಈ ರಾಜನ ಮುಖ್ಯ ಮಂತ್ರಿಯೇ ಕಾಣ್ವಶಾಖೆಯ ಬ್ರಾಹ್ಮಣನಾಗಿದ್ದುದರಿಂದ ಈ ಕಾಣ್ವ ಮಂತ್ರಿಯ ಸಾಹಾಯ್ಯದಿಂದ ಕಾಣ್ವಶಾಖೆಯ ಬ್ರಾಹ್ಮಣರಿಗೆ ರಾಜಾಶ್ರಯವು ದೊರೆಯುವುದು ಕ್ರಮಪ್ರಾಪ್ತವಾಗಿದೆ ಅತಏವ ಇದೇ ಕಾಲದಲ್ಲಿದ್ದ ಕಾಣ್ವಶಾಖೆಯ ಬ್ರಾಹ್ಮಣರಾದ ಮಧ್ಯಗೇಹಭಟ್ಟರು ಈ ಕಾಣ್ವ ಮಂತ್ರಿಯ ಸಾಹಾಯ್ಯದಿಂದ ಬೇಲೂರು ರಾಜಧಾನಿಯಿಂದ ತುಳುನಾಡಿಗೆ ಬಂದು, ಇಲ್ಲಿ ನೆಲೆಗೊಂಡರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಈ ಮಧ್ಯಗೇಹಭಟ್ಟರು ಮೊಟ್ಟಮೊದಲು ಉಡುಪಿಯಲ್ಲಿ ಎಂದರೆ ಶಿವರೂಪ್ಯಗ್ರಾಮದಲ್ಲಿ ಕೆಲವು ದಿವಸ ವಾಸಮಾಡಿ, ಆಬಳಿಕ ಈ ಶಿವರೂಪ್ಯಗ್ರಾಮದಿಂದ ಆಗ್ನೇಯದಿಕ್ಕಿಗೆ ೭ ಮೈಲುಗಳ ಮೇಲೆ ಇರುವ ಪಾಜಕ ಕ್ಷೇತ್ರಕ್ಕೆ ಹೋಗಿ, ಅಲ್ಲಿ ಸ್ಥಿರವಾಗಿ ನೆಲೆಗೊಳಿಸಿದರೆಂದು ಸುಮಧ್ವವಿಜಯದಲ್ಲಿ ಕಂಠೋಕ್ತವಾಗಿ ಹೇಳಿಯೇ ಇದೆ. ಇಷ್ಟೆಲ್ಲ ವಿವರಣೆಯ ಫಲಿತಾರ್ಥವೇನೆಂದರೆ, ಮೈಸೂರು ದೇಶದಲ್ಲಿ ಹೊಯ್ಸಳ ಯಾದವರ ರಾಜಧಾನಿಯಾದ ಬೇಲೂರು [1] ಪಟ್ಟಣವೇ ಶ್ರೀಮನ್ಮಧ್ವಾಚಾರ್ಯರ ಪೂರ್ವಜರಾದ ಮಧ್ಯಗೇಹಭಟ್ಟರ ಜನ್ಮಸ್ಥಳವೆಂಬುದು ಸಿದ್ಧ.

---

೧ ಈ ಬೇಲೂರು, ಈಗಿನ ಹಾಸನ ಜಿಲ್ಲೆಯಲ್ಲಿ ತಾಲೂಕಿನ ಸ್ಥಳವಾಗಿದೆ. ಇಲ್ಲಿ ಈಗಲೂ ಕಾಣ್ವಶಾಖೆಯ ಬ್ರಾಹ್ಮಣರು ಇದ್ದಾರೆ.

# ಶ್ರೀಮುಜ್ಜ್ವಯತೀರ್ಥರ ಸ್ಥಳನಿರ್ಣಯ

ಶ್ರೀಮುಜ್ಜ್ವಯತೀರ್ಥರು ಯಾವ ಯರಗೋಳ ಗ್ರಾಮದ ಗುಹೆಯಲ್ಲಿ ಕುಳಿತುಕೊಂಡು ಗ್ರಂಥರಚನೆಯನ್ನು ಮಾಡಿದರೆಂದು ಜಯತೀರ್ಥ ವಿಜಯ ಗ್ರಂಥಗಲ್ಲಿ ಅವರ ಸಾಕ್ಷಾತ್ ಶಿಷ್ಯರಾದ ವ್ಯಾಸತೀರ್ಥರೇ ಹೇಳಿದ್ದಾರೆಯೋ, ಆ ಗುಹೆಯಿಂದ ಪಶ್ಚಿಮಕ್ಕೆ ೧೨ ಮೈಲುಗಳ ಮೇಲೆ ಭೀಮಾ ನದಿಯ ತೀರದಲ್ಲಿರುವ **ಹುರಸಗುಂಡಗಿ** ಗ್ರಾಮವೇ ಈ ಶ್ರೀಮುಜ್ಜ್ವಯತೀರ್ಥರ ಎಂದರೆ ಶ್ರೀಮಟ್ಟೀಕಾಚಾರ್ಯರ ಜನ್ಮಸ್ಥಳವಾಗಿದೆ. ಈ ಗ್ರಾಮದಲ್ಲಿ ಶ್ರೀಮಟ್ಟೀಕಾಚಾರ್ಯರ ವಂಶಜರಾದ ಶ್ರೀಮಾನ್ ನಾಡಗೌಡ ಶಿವರಾಮಪಂತರೆಂಬ ಕಾಣ್ವಶಾಖೆಯ ಮಾಧ್ವಬ್ರಾಹ್ಮಣರು ಇದ್ದಾರೆ. ಶ್ರೀಮುಜ್ಜ್ವಯತೀರ್ಥರ ಪೂರ್ವಾಶ್ರಮದ ವಾಸಸ್ಥಳವನ್ನು ಸಂಶೋಧಿಸುತ್ತಿರಲು ಹೊಟ್ಟಮೊದಲು ನಾನು ಕ್ರಿ. ಶ. ೧೯೮೯ರಲ್ಲಿ ಸುರಪುರಕ್ಕೆ ಹೋದಾಗ್ಗೆ, ಅಲ್ಲಿಯ ಕಾಣ್ವಶಾಖೆಯ ಮಾಧ್ವಮತದ ದಿವಾಣರಾದ ವೇದಮೂರ್ತಿ ಗುರಾಚಾರ್ಯ ಕನಕಗಿರಿ ಸುರಪುರ ಹಾಗೂ ವೇದಮೂರ್ತಿ ಶ್ರೀನಿವಾಸಾಚಾರ್ಯ ಕೊಡೇಕಲ್ಲ ಸುರಪುರ ಈ ಉಭಯ ಪಂಡಿತರು, ಹುರಸಗುಂಡಗಿ ಗ್ರಾಮದ ನಾಡಗೌಡರ ಮನೆತನದಲ್ಲಿ ಪರಂಪರಾಗತವಾಗಿದ್ದ ಐತಿಹ್ಯವನ್ನು ನನಗೆ ಹೀಗೆ ಹೇಳಿದರು:– "ಹುರಸಗುಂಡಗಿ ಗ್ರಾಮದ ನಾಡ-ಗೌಡರ ಮನೆತನದಲ್ಲಿ ಶ್ರೀಮುಜ್ಜ್ವಯತೀರ್ಥರು ಅವತರಿಸಿದರು. ಇವರ ಪೂರ್ವಾಶ್ರಮದ ಹೆಸರು ದುಂಡೋಪಂತರು; ಇವರ ತಂದೆಯ ಹೆಸರು ರಘುನಾಥಪಂತರು. ಈ ವೀರಶಿರೋಮಣಿಯಾದ ದುಂಡೋಪಂತರು ಯರಗೋಳ ಗುಡ್ಡಕ್ಕೂ ಮೇಲಿಂದ ಮೇಲೆ ಬೇಟೆಯನ್ನಾಡುವುದಕ್ಕೆ ಹೋಗುತ್ತಿದ್ದರು. ಒಂದು ದಿವಸ ಇವರು ಬೇಟೆಯನ್ನಾಡಿ ಮನೆಗೆ ಬರುವಾಗ್ಗೆ ಬಹಳ ನೀರಡಿಸಿದ್ದರಿಂದ ಮಾರ್ಗದಲ್ಲಿ ಶ್ರೀಚಂದಲಾಪರಮೇಶ್ವರೀ ದೇವಿಯ ಗುಡಿಯ ಹತ್ತಿರ ಭೀಮಾನದಿಯಲ್ಲಿ ಪಶುಗಳ ಹಾಗೆ ನದಿಗೆ ಬಾಯಿಯನ್ನು ಹಚ್ಚಿ ನೀರನ್ನು ಕುಡಿಯುತ್ತಿರಲು, ಅದೇ ಕಾಲಕ್ಕೆ ಶ್ರೀಅಕ್ಷೋಭ್ಯತೀರ್ಥಸ್ವಾಮಿಗಳವರು ಕರ್ಮಧರ್ಮ ಸಂಯೋಗದಿಂದ ಆ ದೇವಿಯ ಗುಡಿಯಲ್ಲಿ ಇಳಿದುಕೊಂಡಿದ್ದು, ಸ್ನಾನಾರ್ಥವಾಗಿ ನದಿಗೆ ಬಂದು, ಆ

ಸ್ವಾಮಿಗಳವರು, ನದಿಗೆ ಬಾಯಿಯನ್ನು ಹಚ್ಚಿ ನೀರನ್ನು ಕುಡಿಯುತ್ತಿರುವ ಈ ಯುವರಾಜನನ್ನು ನೋಡಿ "ಕಿಂ ಪಶುಃ ಪೂರ್ವದೇಹೇ ?" ಎಂದು ಈತನನ್ನು ಕುರಿತು ಪ್ರಶ್ನೆಯನ್ನು ಮಾಡಿದರು. ಹೀಗೆ ಕೇಳಿದಾಕ್ಷಣವೇ ಈತನಿಗೆ ವೈರಾಗ್ಯವು ಪ್ರಾಪ್ತವಾಗಿ, ಈತನು ಶ್ರೀ ಅಕ್ಷೋಭ್ಯತೀರ್ಥ ಸ್ವಾಮಿಗಳವರಿಂದ ಸನ್ಯಾಸಾಶ್ರಮವನ್ನೂ "ಜಯತೀರ್ಥ" ಎಂಬ ಆಶ್ರಮ-ನಾಮವನ್ನೂ ಸ್ವೀಕರಿಸಿದನು."

ಈ ಐತಿಹ್ಯವು, ಶ್ರೀಜಯತೀರ್ಥರ ಸಾಕ್ಷಾತ್ ಶಿಷ್ಯರಾದ ವ್ಯಾಸತೀರ್ಥರು ಬರೆದ ಶ್ರೀಜಯತೀರ್ಥ ವಿಜಯ ಗ್ರಂಥಕ್ಕೆ ಸರ್ವ ದೃಷ್ಟಿಯಿಂದಲೂ ಸಮರ್ಪಕವಾಗಿ ಅನ್ವಯಿಸುತ್ತಿರುವುದರಿಂದ ಇದು ಐತಿಹಾಸಿಕ ಸತ್ಯವಾಗಿರುತ್ತದೆಂಬುದು ಸಿದ್ಧ.

ಈ ವಸ್ತುಸ್ಥಿತಿಯನ್ನು ಎಂದರೆ ಶ್ರೀಮಜ್ಜಯತೀರ್ಥರ ವಾಸ್ತವವಾದ ಈ ಜನ್ಮಸ್ಥಳವನ್ನು ಕಾಲಾಂತರದಿಂದ ಮರೆತು, ಶ್ರೀಜಯತೀರ್ಥರು ನಿರ್ಯಾಣ ಹೊಂದಿದ ಬಳಿಕ ೩೪೭ ವರ್ಷಗಳ ಮೇಲಿನ ೧೭ನೆಯ ೧೮ನೆಯ ಶತಮಾನಗಳ ಕವಿಗಳಲ್ಲಿ ಒಬ್ಬರು ಶ್ರೀಜಯತೀರ್ಥರ ಜನ್ಮಸ್ಥಳವು ಅತ್ತ ಇತ್ತೆಂದೂ, ಮತ್ತೊಬ್ಬರು ಇತ್ತ ಇದ್ದಿತೆಂದೂ ಹೀಗೆ ಅವಾಸ್ತವವಾದ ಸ್ಥಳಗಳನ್ನು ತೋರಿಸಿದ್ದಾರೆಂಬುದು ಬಹುಮನೋರಂಜಕವಾದ ವೃತ್ತಾಂತವಾಗಿರುವುದರಿಂದ ಇದನ್ನು ನಮ್ಮ ವಾಚಕರ ಅವಗಾಹನಕ್ಕಾಗಿ ಇದರಡಿಯಲ್ಲಿ ಸಾದ್ಯಂತವಾಗಿ ಹೇಳುತ್ತೇವೆ.

ಶ್ರೀಜಯತೀರ್ಥರು ನಿರ್ಯಾಣಹೊಂದಿದ ಬಳಿಕ ೩೪೭ ವರ್ಷಗಳ ಮೇಲೆ ಕ್ರಿ. ಶ. ೧೬೭೫ರಲ್ಲಿ (ಎಂದರೆ ಶಕವರ್ಷದ ೧೫೯೭ರಲ್ಲಿ) ಸಂಕರ್ಷಣಾಚಾರ್ಯರೆಂಬುವರು ಶ್ರೀಜಯತೀರ್ಥವಿಜಯವೆಂಬ ಗ್ರಂಥವನ್ನು ರಚಿಸಿ, ಅದರಲ್ಲಿ ಎಷ್ಟೋ ಅನೈತಿಹಾಸಿಕವಾದ ಸಂಗತಿಗಳನ್ನು ಬರೆದಿದ್ದಾರೆ. ಅದು ಹೇಗೆಂದರೆ,

ಶ್ರೀವ್ಯಾಸತೀರ್ಥರು ಶ್ರೀಮಜ್ಜಯತೀರ್ಥರ ಸಾಕ್ಷಾತ್ ಶಿಷ್ಯರಾದುದರಿಂದ ಅರ್ಥಾತ್ ಶ್ರೀಜಯತೀರ್ಥರ ಸಮಕಾಲೀನ ಲೇಖಕರಾದುದರಿಂದ ಇವರು ಬರೆದ ಶ್ರೀಜಯತೀರ್ಥ ವಿಜಯಗ್ರಂಥದಲ್ಲಿಯ ಸಂಗತಿಗಳು ಐತಿಹಾಸಿಕ ಸತ್ಯವಾಗಿರುತ್ತವೆಂಬುದು ಸೂರ್ಯಪ್ರಕಾಶದಷ್ಟು

ಸ್ಪಷ್ಟವಾಗಿದೆ. ಅತಏವ ಈ ವ್ಯಾಸತೀರ್ಥರು ಬರೆದ ಶ್ರೀಜಯತೀರ್ಥರ ಚರಿತ್ರೆಗೆ ಭಿನ್ನವಾದ ಸಂಗತಿಗಳೆಲ್ಲವೂ ಅಸತ್ಯವಾದವುಗಳೆಂಬುದು ಸಿದ್ಧ.

ಇತ್ಯರ್ಥವೇನೆಂದರೆ, ಈ ವ್ಯಾಸತೀರ್ಥರು ಬರೆದ ಶ್ರೀಜಯತೀರ್ಥ ವಿಜಯ ಗ್ರಂಥಕ್ಕೂ ಸಂಕರ್ಷಣಾಚಾರ್ಯರು ಬರೆದ ಶ್ರೀಜಯತೀರ್ಥ ವಿಜಯ ಗ್ರಂಥಕ್ಕೂ ಹೋಲಿಸಿ ನೋಡಿದರೆ, ಸಂಕರ್ಷಣಾಚಾರ್ಯರು ತಮ್ಮ ಜಯತೀರ್ಥವಿಜಯ ಗ್ರಂಥದಲ್ಲಿ ಅಸತ್ಯವಾದ ಎಷ್ಟು ಸಂಗತಿಗಳನ್ನು ಬರೆದಿದ್ದಾರೆಂಬುದು ತಿಳಿದು ಬಂದು, ನಮ್ಮ ಪ್ರಸ್ತುತ ವಿಷಯದ ಮೇಲೆಯೂ ಪ್ರಕಾಶವು ಬೀಳುವುದು.

(ತುಲನಾತ್ಮಕವಾದ ನಿರೀಕ್ಷಣ)

| ವ್ಯಾಸತೀರ್ಥರ "ಜಯತೀರ್ಥ ವಿಜಯ"ದಲ್ಲಿ | ಸಂಕರ್ಷಣಾಚಾರ್ಯರ 'ಶ್ರೀಜಯತೀರ್ಥ ವಿಜಯ'ದಲ್ಲಿ |
|---|---|
| (೧) ಶ್ರೀಜಯತೀರ್ಥರಿಗೆ ಪೂರ್ವಾಶ್ರಮದಲ್ಲಿ ಒಬ್ಬಳೇ ಹೆಂಡತಿಯು ಇದ್ದಾಳೆ. | (೧) ಶ್ರೀಜಯತೀರ್ಥರಿಗೆ ಪೂರ್ವಾಶ್ರಮದಲ್ಲಿ **ಇಬ್ಬರು ಹೆಂಡಂದಿರು** ಇದ್ದರೆಂದು ಹೇಳಿರುವುದು ಅಸತ್ಯವಾಗಿದೆ. |
| (೨) ಶ್ರೀಜಯತೀರ್ಥರು ದುರ್ಗಾದೇವಿಯನ್ನು ಕುರಿತು ತಪಸ್ಸನ್ನು ಮಾಡಿದರು. | (೨) ಶ್ರೀಜಯತೀರ್ಥರು ಶಾರದಾ**ದೇ**ವಿಯನ್ನು ಕುರಿತು ತಪಸ್ಸನ್ನು ಮಾಡಿದರೆಂದು ಹೇಳಿರುವುದು ಅಸತ್ಯವಾಗಿದೆ. |
| (೩) ಶ್ರೀಜಯತೀರ್ಥರು ಪೂರ್ವಾಶ್ರಮದಲ್ಲಿ ನದಿಗೆ ಬಾಯಿಯನ್ನು ಹಚ್ಚಿ ನೀರನ್ನು **ಕುಡಿದದ್ದು** ಭೀಮಾನದಿಯಲ್ಲಿಎಂದಿಷ್ಟೇ **ಹೇಳಿದ್ದಾರೆ.** | (೩) ಶ್ರೀಜಯತೀರ್ಥರು ಪೂರ್ವಾಶ್ರಮದಲ್ಲಿ ನದಿಗೆ ಬಾಯಿಯನ್ನು ಹಚ್ಚಿ ಭೀಮಾ ನದಿಯ ನೀರನ್ನು ಕುಡಿದದ್ದು **ಪಂಢರಪುರದ ಹತ್ತರ** ಎಂದು ಹೇಳಿರುವುದು ಅಸತ್ಯವಾಗಿದೆ. |
| (೪) ಯತಿಶ್ರೇಷ್ಠರಾದ ಶ್ರೀಜಯತೀರ್ಥರನ್ನು (ಎಂದರೆ ಗಂಡನನ್ನು) ನೋಡುವುದಕ್ಕೆ ಸಮರ್ಥಳಾಗದೆ ಹೆಂಡತಿಯು ತಾನಾಗಿಯೇ ವಿವೇಕದಿಂದ ಸುರತಗೃಹದೊಳಗಿಂದ ಹೊರಗೆ ಬಂದಳು | (೪) ಇಬ್ಬರು ಹೆಂಡಂದಿರು ಸುರತಗೃಹದೊಳಗೆ ಹೋದೊಡನೆಯೇ ಅವರನ್ನು ಹೆದರಿಸುವುದಕ್ಕಾಗಿ ಶ್ರೀಜಯತೀರ್ಥರು **ಸರ್ಪರೂಪವನ್ನು ಧರಿಸಿದ್ದರೆಂದು** ಹೇಳಿರುವುದು ಅಸತ್ಯವಾಗಿದೆ. |
| (೫) **ಶ್ರೀ ಅಕ್ಷೋಭ್ಯತೀರ್ಥರಿಗೂ** ಶ್ರೀವಿದ್ಯಾರಣ್ಯರಿಗೂ ವಾದವಿವಾದವಾಯಿತೆಂಬ ಉಲ್ಲೇಖವೇ ಇದರಲ್ಲಿ ಇಲ್ಲ. | (೫) **ಶ್ರೀಅಕ್ಷೋಭ್ಯತೀರ್ಥರು ಶ್ರೀವಿದ್ಯಾರಣ್ಯರನ್ನು ಸೋಲಿಸಿದರೆಂದು** ಹೇಳಿರುವುದು ಅಸತ್ಯವಾಗಿದೆ. |

ಈ ೫ ಸಂಗತಿಗಳಲ್ಲಿ ನಮ್ಮ ಪ್ರಸ್ತುತ ವಿಷಯವು ಯಾವುದೆಂದರೆ, "ಶ್ರೀಜಯತೀರ್ಥರು ಪೂರ್ವಾಶ್ರಮದಲ್ಲಿ ನದಿಗೆ ಬಾಯಿಯನ್ನು ಹಚ್ಚಿ ಭೀಮಾ ನದಿಯಲ್ಲಿ ನೀರನ್ನು ಕುಡಿದದ್ದು ಪಂಢರಪುರದ ಹತ್ತಿರ ಎಂದು ಸಂಕರ್ಷಣಾಚಾರ್ಯರು ಹೇಳಿರುವುದು, ಅಸತ್ಯವಾಗಿದೆ-" ಈ ಪ್ರಕಾರ ಸಂಕರ್ಷಣಾಚಾರ್ಯರು ಹೇಳಿದ ಅನೈತಿಹಾಸಿಕ ಸಂಗತಿಯನ್ನೇ ನಂಬಿ, ಇವರ ತರುವಾಯ ಒಂದುನೂರು ವರ್ಷಗಳ ಮೇಲೆ ಆಗಿಹೋದಂಥ ಎಂದರೆ ಕ್ರಿ. ಶ. ೧೭೭೫ರಲ್ಲಿ[೧] ಜೀವಿಸುತ್ತಿದ್ದಂಥ ವ್ಯಾಸವಿಠ್ಠಲದಾಸರು ಎಂಬರೆ ಕಲ್ಲೂರು ಸುಬ್ಬಣ್ಣದಾಸರು ಶ್ರೀಮಜ್ಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವು ಪಂಢರಪುರದ ಹತ್ತಿರವೇ ಇರಬೇಕೆಂದು ಊಹಿಸಿದರು. ಈ ಸುಬ್ಬಣ್ಣದಾಸರು ದಾಸಕೂಟದವರಾದುದರಿಂದ ಇವರು ಪಂಢರಪುರದ ವಿಠ್ಠಲನ ಭಕ್ತರೆಂಬುದು ಸ್ಪಷ್ಟವಾಗಿದೆ. ಇತ್ಯರ್ಥವೇನೆಂದರೆ, ಈ ದಾಸರು ಪಂಢರಪುರಕ್ಕೆ ಮೇಲಿಂದ ಮೇಲೆ ಹೋಗುತ್ತಿದ್ದುದರಿಂದ ಇವರು ಪಂಢರಪುರಕ್ಕೆ ಹೋದಾಗ್ಗೆ, ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವನ್ನು ಶೋಧಮಾಡುತ್ತಿರಲು, ಇದೇ ಕಾಲಕ್ಕೆ ಮಹಾರಾಷ್ಟ್ರ ದೇಶದಲ್ಲಿದ್ದಂಥ ಮಹಿಪತಿಯೆಂಬ ಮರಾಠಿ ಕವಿಯು (ಕ್ರಿ. ಶ. ೧೭೧೫-೧೭೯೦) **'ಭಕ್ತವಿಜಯ'** ಹಾಗೂ **'ಸಂತಲೀಲಾಮೃತ'** ಎಂಬೆರಡು ಗ್ರಂಥಗಳನ್ನು ಬರೆದು, ಭಕ್ತವಿಜಯಗ್ರಂಥದಲ್ಲಿ-ದಾಮಾಜಿಪಂತ, ಚೋಖಾ ಮೇಳಾ, ಕಾಹ್ನೋಪಾತ್ರಾ ಪ್ರಭೃತಿ ಸಾಧುಸಂತರೂ ಸಾಧ್ವಿಗಳೂ ಪಂಢರಪುರದಿಂದ ೧೪ ಮೈಲುಗಳ ಮೇಲೆ ಇರುವ ಮಂಗಳವೇಡೆ ಗ್ರಾಮದಲ್ಲಿಯೇ ವಾಸಿಸುತ್ತಿದ್ದರೆಂದು ನಿರೂಪಿಸಿದ್ದರಿಂದ ಆ ಕಾಲಕ್ಕೆ ಈ ಮಂಗಳವೇಡೆ ಗ್ರಾಮವು ಸತ್ಪುರುಷರ ಹಾಗೂ ಸಾಧ್ವಿಗಳ ವಾಸಸ್ಥಳವೆಂದು ಪ್ರಖ್ಯಾತವಾಗಿತ್ತು. ಆತಏವ ಈ ಕಲ್ಲೂರು ಸುಬ್ಬಣ್ಣದಾಸರು ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವು, ಮಂಗಳವೇಡೆಗ್ರಾಮವಿರಬಹುದೆಂದು ತರ್ಕಿಸಿದರು![೨] ಇಷ್ಟೇ ಅಲ್ಲ, ಶ್ರೀಜಯತೀರ್ಥ ವಿಜಯ ಗ್ರಂಥದಲ್ಲಿ ಶ್ರೀಜಯತೀರ್ಥರ ಪೂರ್ವಾಶ್ರಮದ ಮನೆತನವು, ವೈದಿಕ ಬ್ರಾಹ್ಮಣರ

---

೧ ಕರ್ಣಾಟಕ ಕವಿಚರಿತೆ (ಸಂಪುಟ ೩, ಪುಟ ೧೩೯)

೨ ಮಹಾರಾಷ್ಟ್ರ ಕವಿಚರಿತೆಕಾರರಾದ ಶ್ರೀಮಾನ್ ಜಗನ್ನಾಥ ರಘುನಾಥ ಅಜಗಾಂವಕರ

ಮನೆತನವೆಂದು ವರ್ಣಿತವಾಗಿರದೆ, ಗೃಹಸ್ಥ ಬ್ರಾಹ್ಮಣರ ಮನೆತನವೆಂದು ಕೀರ್ತಿತವಾಗಿರುವುದರಿಂದ ಆ ಮಂಗಳವೇಡೆ ಗ್ರಾಮದಲ್ಲಿದ್ದ ಗೃಹಸ್ಥ ಬ್ರಾಹ್ಮಣರ ಮನೆತನಗಳಲ್ಲಿ ಪ್ರಮುಖವಾದ ದೇಶಪಾಂಡೆ ಮನೆತನದಲ್ಲಿಯೇ ಶ್ರೀಜಯತೀರ್ಥರು ಅವತರಿಸಿದರೆಂದು ಕಲ್ಪಿಸಿ, ಈ ಸುಬ್ಬಣ್ಣದಾಸರು "ಜಯತೀರ್ಥರಾಯ ।.... ಮಂಗಳವೇಡಿಯಲಿ ।.... ದೇಶಪಾಂಡೇರ ಕೂಸಾಗಿ ಜನಿಸಿ ।" ಎಂಬುದೊಂದು ಪದವನ್ನೇ ರಚಿಸಿ ಹಾಡಿದರು !! ಆದರೆ ಈ ಮಂಗಳವೇಡೆ ಗ್ರಾಮವು, ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವೆಂದು ಯಾವ **ಜಯತೀರ್ಥ ವಿಜಯ** ಗ್ರಂಥದಲ್ಲಿಯೂ ಉಲ್ಲೇಖವಿಲ್ಲ. ಇಷ್ಟೇ ಅಲ್ಲ ಇದೇಕಾಲದಲ್ಲಿದ್ದಂಥ (ಎಂದರೆ ೧೮ನೆಯ ಶತಮಾನದ ಉತ್ತರಾರ್ಧದಲ್ಲಿದ್ದಂಥ) ದೈವಜ್ಞ ಭೀಮಾಚಾರ್ಯರು—ಈ ಸಂಕರ್ಷಣಾಚಾರ್ಯರ ಹಾಗೂ ಈ ಸುಬ್ಬಣ್ಣದಾಸರ ಈ ಊಹೆಗಳನ್ನೆಲ್ಲ ತಿರಸ್ಕರಿಸಿ ಶ್ರೀಸತ್ಯಬೋಧಸ್ವಾಮಿಗಳ ಅನುಜ್ಞೆಯಿಂದ "**ಶ್ರೀ ಪೂರ್ಣಬೋಧ ಗುರುವಂಶಕಥಾಕಲ್ಪತರು**" ಎಂಬ ಗ್ರಂಥವನ್ನು ಬರೆದು, ಅದರಲ್ಲಿ ೬ನೆಯ ಶಾಖಾಸರ್ಗದಲ್ಲಿ ಶ್ರೀಮಜ್ಜಯತೀರ್ಥರ ಚರಿತ್ರೆಯನ್ನು ನಿರೂಪಿಸುವಾಗ್ಗೆ:— "ಶ್ರೀಜಯತೀರ್ಥರು ಮಳಖೇಡದ ಹತ್ತರ ಕಾಕಿಣೀ ನದಿಯಲ್ಲಿ (ಪಶುಗಳ ಹಾಗೆ ನದಿಗೆ ಬಾಯಿಯನ್ನು ಹಚ್ಚಿ) ನೀರನ್ನು ಕುಡಿದರು." ಎಂದು ಹೇಳಿದ್ದಾರೆ. ಧ್ವನಿತಾರ್ಥವೇನೆಂದರೆ, ಈ ಭೀಮಾಚಾರ್ಯರು, ಮಳಖೇಡವಾಗಲಿ ಅದರ ಹತ್ತರದ ಗ್ರಾಮವಾಗಲಿ ಶ್ರೀಜಯ-

---

ಇವರು ಮಹಿಪತಿ ಕವಿಯ ವಿಷಯವಾಗಿ ಹೀಗೆ ಬರೆದಿದ್ದಾರೆ:— "ಈ ಮಹಿಪತಿಯು ಮರಾಠಿಕವಿಯಾಗಿದ್ದುದಲ್ಲದೆ—ಕೀರ್ತನಕಾರನೂ ಆಗಿದ್ದನು. ಇವನು ಕನ್ನಡ, ಗುಜರಾಥಿ, ಹಿಂದೀ ಭಾಷೆಗಳನ್ನೂ ಬಲ್ಲವನಾಗಿದ್ದನು. ಈ ಮಹಿಪತಿಕವಿಯು 'ಭಕ್ತವಿಜಯ' ಎಂಬ ಗ್ರಂಥವನ್ನು ಶಕವರ್ಷದ ೧೬೮೪ರಲ್ಲಿ ಎಂದರೆ ಕ್ರಿ. ವ. ೧೭೬೨ರಲ್ಲಿ ರಚಿಸಿದನು. ಇವನ ವಾಸಸ್ಥಳವಾದ ತಾಹರಾಬಾದ ಗ್ರಾಮವು [ಜಿಲ್ಹಾ-ಅಹಮ್ಮದನಗರ) ಪಂಢರಪುರಕ್ಕೆ ಸಮೀಪವಾಗಿದ್ದುದರಿಂದ ಏಕಾದಶಿಗೊಮ್ಮೆ ಪಂಢರಪುರಕ್ಕೆ ಬಂದು, ಕೀರ್ತನವನ್ನು ಮಾಡುತ್ತಿದ್ದನು." (ಮಹಾರಾಷ್ಟ್ರ ಕವಿಚರಿತ್ರ ಭಾಗ ೨. ಪುಟ ೪೬।೪೭) ಇತ್ಯರ್ಥವೇನೆಂದರೆ, ಈ ಮಹಿಪತಿಕವಿಯು ಈ ಕಲ್ಲೂರು ಸುಬ್ಬಣ್ಣದಾಸರ ಸಮಕಾಲೀನನಾದುದರಿಂದ ಈ ಕವಿಯೂ ಸಸ ಮಂಗಳವೇಡೆಯು ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವೆಂದು ಊಹಿಸುವುದಕ್ಕೆ ಈ ಸುಬ್ಬಣ್ಣದಾಸರಿಗೆ ಪ್ರೋತ್ಸಾಹಿಸಿರಬಹುದು.

ತೀರ್ಥರ ಪೂರ್ವಾಶ್ರಮದ ವಾಸಸ್ಥಳವೆಂದು ಊಹಿಸುವುದಕ್ಕೆ ಹೊರಟಿದ್ದಾರೆ.

ಈ ಪ್ರಕಾರ ಶ್ರೀ ಜಯತೀರ್ಥರ ನಿರ್ಯಾಣಕಾಲದಿಂದ ಮೂರು-ನೂರು, ನಾಲ್ಕುನೂರು ವರ್ಷಗಳ ಮೇಲೆ ಆಗಿಹೋದಂಥ ಈ ಸಂಕರ್ಷಣಾಚಾರ್ಯರು, ಈ ಸುಬ್ಬಣ್ಣದಾಸರು, ಹಾಗೂ ಈ ದೈವಜ್ಞಧೀಮಾಚಾರ್ಯರು-ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವು, ಒಬ್ಬರು ಇತ್ತ ಇರಬಹುದೆಂದೂ, ಒಬ್ಬರು ಅತ್ತ ಇರಬಹುದೆಂದೂ ಊಹಿಸುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಅರ್ಥಾತ್ ಈ ವಿಷಯವಾಗಿ ಇವರಲ್ಲಿ ಏಕವಾಕ್ಯತೆಯಿಲ್ಲ; ಮತಭೇದವಿದೆ. ಇದೂ ಅಲ್ಲದೆ ಹುರಸಗುಂಡಿಗಿ ಗ್ರಾಮವು ಈ ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವೆಂದೂ ಅಲ್ಲಿಯ ನಾಡಗೌಡ ಶಿವರಾಮಪಂತರ ಮನೆತನದವರು ಇವರ ವಂಶಜರೆಂದೂ ಆ ನಾಡಗೌಡರ ಮನೆತನದಲ್ಲಿ ಐತಿಹ್ಯವಿರುತ್ತದೆಂಬುದನ್ನು ಈ ಮೊದಲೇ ಹೇಳಿದ್ದೇವೆ.

ಆದುದರಿಂದಲೇ ಈ ಮೂರು ಸ್ಥಳಗಳಲ್ಲಿ ಯಾವುದು ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವೆಂಬುದನ್ನು ಕಂಡು ಹಿಡಿಯುವುದಕ್ಕೋಸ್ಕರ ಮಂಗಳವೇಢೆ, ಮಳಖೇಡ, ಯಲಗೋಳ, ಹುರಸಗುಂಡಿಗಿ ಗ್ರಾಮಗಳಿಗೆ ಹೋಗಿ ಸಂಶೋಧಿಸಿದೆನು. " ಇವುಗಳಲ್ಲಿ ಯಾವ ಗ್ರಾಮವು, ಶ್ರೀಜಯತೀರ್ಥರ ಸಾಕ್ಷಾತ್ ಶಿಷ್ಯ ವ್ಯಾಸತೀರ್ಥ ವಿರಚಿತ ಜಯತೀರ್ಥವಿಜಯಗ್ರಂಥದಲ್ಲಿ ವರ್ಣಿತವಾದ ಸಂಗತಿಗಳಿಗೆ ಅನ್ವಯಿಸುತ್ತದೆಯೋ ಅದೇ ಗ್ರಾಮವೂ, ಹಾಗೂ ಆ ಗ್ರಾಮದಲ್ಲಿ ಯಾವ ಮನೆತನವು, ಈ ಜಯತೀರ್ಥವಿಜಯ ಗ್ರಂಥದಲ್ಲಿ ಕೀರ್ತಿತವಾದಂತೆ ಶ್ರೀಜಯತೀರ್ಥರ ಪೂರ್ವಾಶ್ರಮದ ಕ್ಷಾತ್ರವೃತ್ತಿಗೂ, ಆಂತರ ಪ್ರಮಾಣಗಳಿಂದ ನಿರ್ಣಯಿಸಲ್ಪಟ್ಟಂತೆ ಶ್ರೀಜಯತೀರ್ಥರ ಶಾಖೆಗೂ ಅನ್ವಯಿಸುತ್ತದಯೋ ಅದೇ ಮನೆತನವೂ ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವೆಂಬುದು (ಎಂದರೆ ಜನ್ಮಸ್ಥಳವೆಂಬುದು) ಸತ್ಯ. " ಎಂಬ ದೃಷ್ಟಿಯನ್ನಿಟ್ಟುಕೊಂಡು ನಾನು ಮೊಟ್ಟಮೊದಲು ಸನ್ ೧೯೩೭ನೆಯ ಜೂನ ೧ನೆಯ ತಾರೀಖಿನ ದಿವಸ ಮಂಗಳವೇಢೆ ಗ್ರಾಮಕ್ಕೆ ಹೋಗಿ, ಅಲ್ಲಿಯ ಶ್ರೀಮಾನ್ ಲಾಗೂ ಮಾಮಲೇದಾರರ ಸಾಹಾಯ್ಯದಿಂದ ಆ ಗ್ರಾಮದಲ್ಲಿಯೂ ಆ ದೇಶಪಾಂಡೆ ಮನೆತನಗಳಲ್ಲಿಯೂ

ಸಂಶೋಧಿಸಿದೆನು. ಯಾವ ದೃಷ್ಟಿಯಿಂದ ನೋಡಿದರೂ ಆ ದೇಶಪಾಂಡೆ ಮನೆತನವೂ ಆ ಮಂಗಳವೇಡೆ ಗ್ರಾಮವೂ ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವಲ್ಲವೆಂಬುದು ಅರ್ಥಾತ್ ಜನ್ಮಸ್ಥಳವಲ್ಲವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಮಳಖೇಡ ಗ್ರಾಮವಂತೂ ಶ್ರೀಜಯತೀರ್ಥರ ವೃಂದಾವನದ ಸ್ಥಳವೆಂದು ಸುಪ್ರಸಿದ್ಧವಾಗಿದೆಯೇ ಹೊರತು ಈ ಗ್ರಾಮವು ಅವರ ಪೂರ್ವಾಶ್ರಮದ ವಾಸಸ್ಥಳವೆಂದು ಐತಿಹ್ಯವೂ ಇಲ್ಲ. ಲೇಖವೂ ಇಲ್ಲ. ಇದಲ್ಲದೆ ಈ ದೈವಜ್ಞ ಭೀಮಾಚಾರ್ಯರು ಹೇಳಿದ ಇನ್ನೊಂದು ಸಂಗತಿಯಂತೂ ಬಹಳ ವಿಚಿತ್ರವಾಗಿದೆ. ಅದು ಯಾವುದೆಂದರೆ, " ಶ್ರೀಜಯತೀರ್ಥರು ಕಾಕಿಣಿ ಅಥವಾ ಕಾಗಿಣಿ ನದಿಯಲ್ಲಿ ನೀರನ್ನು ಕುಡಿದರು. " ಎಂಬುದು. ಈ ಸಂಗತಿಯಂತೂ ಶ್ರೀಜಯತೀರ್ಥರ ಸಾಕ್ಷಾತ್ ಶಿಷ್ಯರಾದ ವ್ಯಾಸತೀರ್ಥರು ರಚಿಸಿದ ಜಯತೀರ್ಥ ವಿಜಯ ಗ್ರಂಥಕ್ಕೆ ಸರ್ವಥೈವ ವಿಸಂಗತವಾಗಿದೆ. ಏಸರೆ ಈ ವ್ಯಾಸತೀರ್ಥರು, ಶ್ರೀಜಯತೀರ್ಥರು ಭೀಮಾನದಿಯಲ್ಲಿ ನೀರನ್ನು ಕುಡಿದರೆಂದು ಹೇಳಿದ್ದಾರೆಯೇ ಹೊರತು ಕಾಗಿಣೀ ನದಿಯಲ್ಲಿ ನೀರನ್ನು ಕುಡಿದರೆಂದು ಹೇಳಿರುವುದಿಲ್ಲ.

ಆದರೆ ಶ್ರೀಮಜ್ಜಯತೀರ್ಥರು ಗ್ರಂಥಗಳನ್ನು ರಚಿಸುತ್ತ ಕುಳಿತುಕೊಂಡಿದ್ದ ಸ್ಥಳವೆಂದು ಜಯತೀರ್ಥ ವಿಜಯ ಗ್ರಂಥದಲ್ಲಿ ವರ್ಣಿತವಾದ ಯರಗೋಳಗ್ರಾಮದ ಗುಹೆಯಿಂದ ಪಶ್ಚಿಮಕ್ಕೆ ೧೨ ಮೈಲುಗಳ ಮೇಲೆ ಭೀಮಾನದಿಯ ತೀರದಲ್ಲಿದ್ದ ಹುರಸಗುಂಡಿಗಿ ಗ್ರಾಮಕ್ಕೂ ಹಾಗೂ ಅದರ ಸುತ್ತುಮುತ್ತಿನ ಪರಿಸ್ಥಿತಿಗೂ ಶ್ರೀ ಜಯತೀರ್ಥರ ಸಾಕ್ಷಾತ್ ಶಿಷ್ಯ ವ್ಯಾಸತೀರ್ಥಕೃತ ಜಯತೀರ್ಥವಿಜಯ ಗ್ರಂಥದಲ್ಲಿ ನಿರೂಪಿತವಾದ ಸಂಗತಿಗಳು ಸಮರ್ಪಕವಾಗಿ ಅನ್ವಯಿಸುತ್ತಿರುವುದರಿಂದಲೂ ಮತ್ತು ಶ್ರೀಜಯತೀರ್ಥರು ಪೂರ್ವಾಶ್ರಮದಲ್ಲಿ ಯುವರಾಜನೆಂದು ಕೀರ್ತಿತರಾಗಿರುವುದಕ್ಕೂ ಇವರು ನಾಡಗೌಡರ[1] (ಎಂದರೆ ಉಪರಾಜರ ಅಥವಾ ಮಾಂಡಲಿಕ

---

೧ ಪುರಾತನಕಾಲದಲ್ಲಿ ಗೌಡನು ಕ್ಷಾತ್ರವೃತ್ತಿಯುಳ್ಳವನು; ಅತಏವ ಗ್ರಾಮದ ರಾಜನು, ಕುಲಕರಣಿಯು ಎಂದರೆ ಶಾನಭೋಗನು ಅಮಾತ್ಯವೃತ್ತಿಯುಳ್ಳವನು ಅತಏವ ಗ್ರಾಮದ ಮಂತ್ರಿಯು ಇನ್ನು ನಾಡಿನ (ಎಂದರೆ ದೇಶದ) ಗೌಡನು ನಾಡಗೌಡನು. ಅರ್ಥಾತ್ ದೇಶದ ಸ್ವಾಮಿ=ದೇಶ

ರಾಜರ) ಮನೆತನದಲ್ಲಿ ಅವತರಿಸಿದ್ದಾರೆಂದು ಐತಿಹ್ಯವಿದ್ದದ್ದಕ್ಕೂ ಸಮನ್ವಯ
ವಾಗುತ್ತಿದ್ದುದರಿಂದಲೂ ಹಾಗೂ ಆಂತರ ಪ್ರಮಾಣಗಳಿಂದ ನಿರ್ಣಯಿಸ
ಲ್ಪಟ್ಟ ಪ್ರಕಾರ ಶ್ರೀಜಯತೀರ್ಥರು ಕಾಣ್ವಶಾಖೆಯ ಮಾಧ್ವಬ್ರಾಹ್ಮಣ
ರಾಗಿದ್ದಂತೆಯೇ ಶ್ರೀ ಜಯತೀರ್ಥರ ವಂಶಜರೆಂದು ಐತಿಹ್ಯವುಳ್ಳಂಥ
ಈ ಹುರಸಗುಂಡಿಗಿ ಗ್ರಾಮದ ಶಿವರಾಮಪಂತ ನಾಡಗೌಡರ ಮನೆತನದ
ವರೂ ಈ ಶ್ರೀಜಯತೀರ್ಥರಂತೆಯೇ ಕಾಣ್ವಶಾಖೆಯ ಮಾಧ್ವ ಬ್ರಾಹ್ಮಣ
ರಾದುದರಿಂದಲೂ ಶ್ರೀಮಜ್ಜಯತೀರ್ಥರು ಹುರಸಗುಂಡಿಗಿ ಗ್ರಾಮದ
ಈ ಶಿವರಾಮಪಂತ ನಾಡಗೌಡರ ಮನೆತನದಲ್ಲಿ ಅವತರಿಸಿದ್ದಾರೆಂಬುದು
ಸಿದ್ಧ. ಅರ್ಥಾತ್ ಶ್ರೀಜಯತೀರ್ಥರ ಪೂರ್ವಾಶ್ರಮದ ವಾಸಸ್ಥಳವು ಈ
ಹುರಸಗುಂಡಿಗಿ ಗ್ರಾಮವೆಂದು ಇತ್ಯರ್ಥ

---

ಸ್ವಾಮಿ=ದೇಸಾವಿ (ಗೋ–ಸ್ವಾಮಿ=ಗೋಸಾವಿ ಆದಂತೆ)=ದೇಸಾಯಿ. ಇತ್ಯರ್ಥವೇನೆಂದರೆ ಪ್ರಾಚೀನಕಾಲದಲ್ಲಿ ನಾಡಗೌಡನು (ಎಂದರೆ ದೇಸಾಯಿಯು) ಉಪರಾಜನಾಗಿ ಅರ್ಥಾತ್ ಮಾಂಡಲಿಕ ರಾಜನಾಗಿ ಇರುತ್ತಿದ್ದನು. ಇದೇ ಮೇರೆಗೆ ನಾಡಿನ (ಎಂದರೆ, ದೇಶದ) ಕರಣಿಯು ನಾಡಕರಣಿಯು (ನಾಡಶಾನಭೋಗನು) ಅರ್ಥಾತ್ ದೇಶದ ಪಾಂಡೆ (ವರ್ಹಾಡ ಪ್ರಾಂತದಲ್ಲಿ ಗ್ರಾಮದ ಕರಣಿಯನ್ನು ಎಂದರೆ ಕುಲಕರಣಿಯನ್ನು 'ಪಾಂಡೆ' ಎಂದು ಈಗಲೂ ಕರೆಯುತ್ತಾರೆ.)=ದೇಶಪಾಂಡೆ. ತಾತ್ಪರ್ಯಾರ್ಥವೇನೆಂದರೆ, ಪೂರ್ವಕಾಲದಲ್ಲಿ ನಾಡಕರಣಿಯು=ನಾಡಶಾನಭೋಗನು ಎಂದರೆ ದೇಶಪಾಂಡೆಯೆಂಬುವನು, ಆ ನಾಡಿನ ಮಂತ್ರಿಯಾಗಿರುತ್ತಿದ್ದನು. 'ದೇಸಾಯಿ' ಮತ್ತು 'ನೇಶಪಾಂಡೆ' ಎಂಬ ಶಬ್ದಗಳ ಪ್ರಚಾರವು, ವಿಜಾಪುರದ ಯುಸುಫ ಆದಿಲಶಹನ ಕಾಲದಿಂದ (ಕ್ರಿ. ವ. ೧೪೮೯–೧೫೧೦) ಉತ್ತರ ಕರ್ನಾಟಕದಲ್ಲಿ ಪ್ರಾರಂಭವಾಯಿತು. ಏಕೆಂದರೆ, ಈ ಆದಿಲಶಹನು ತನ್ನ ರಾಜ್ಯಕಾರಭಾರದ ಎಲ್ಲ ಕಾಗದಪತ್ರಗಳು ಮರಾಠಿಭಾಷೆಯಲ್ಲಿರುವಂತೆ ಏರ್ಪಡಿಸಿದ್ದನು, ಈ ಪದ್ಧತಿಯು ಆದಿಲಶಾಹಿಯ ಕೊನೆಯವರೆಗೂ ಇದ್ದಿತು.

## ೪ನೆಯ ಪರಿಶಿಷ್ಟ

## ಶ್ರೀಮನ್ಮಧ್ವಮತ-ಸಾರ ಸಂಗ್ರಹ



ಶ್ರೀಮಾನ್ ವಿದ್ವಾನ್ ಎಚ್. ಎನ್. ರಾಘವೇಂದ್ರಾಚಾರ್ಯರು ಎಂ. ಎ., ಭಾರತೀಯ ತತ್ತ್ವಶಾಸ್ತ್ರೋಪಾಧ್ಯಾಯರು, ಮಹಾರಾಜರವರ ಕಾಲೇಜ, ಮೈಸೂರು ಇವರು– ತಾವು ಬರೆದ "ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ" ಎಂಬ ಗ್ರಂಥದಲ್ಲಿ ಶ್ರೀಮನ್ಮಧ್ವಮತವನ್ನು ಕುರಿತು ಸುಲಭವಾದ ಕನ್ನಡ ಶೈಲಿಯಿಂದ ಸುಂದರವಾಗಿ ವಿವೇಚಿಸಿದ್ದಾರೆ. ಈ ವಿವೇಚನೆಯ ಸಾರ ಸಂಗ್ರಹವನ್ನು ನಮ್ಮ ವಾಚಕರ ಅವಗಾಹನಕ್ಕಾಗಿ ಇದರಡಿಯಲ್ಲಿ ನಿವೇದಿಸಿದ್ದೇವೆ.

### ದ್ವೈತವೇದಾಂತ ಸಂಗ್ರಹ.

" ಜ್ಞಾನಪ್ರಾಮಾಣ್ಯವು ಸ್ವತಃ ಹುಟ್ಟುವುದು ಮತ್ತು ಜ್ಞಾತವಾಗುವುದು. ಬಾಧರಹಿತವಾದ ಜ್ಞಾನವೆಲ್ಲವೂ ಪಾರಮಾರ್ಥಿಕವಾಗಿ ಪ್ರಮಾಣ. ಜ್ಞಾನವು ಸ್ವರೂಪಜ್ಞಾನವೆಂದೂ, ಪ್ರತ್ಯಕ್ಷಾನುಮಾನಾಗಮಗಳಿಂದ ಹುಟ್ಟಿದ ಜ್ಞಾನವೆಂದೂ ಎರಡು ವಿಧ. ಇವೆರಡಕ್ಕೂ ಪ್ರಪಂಚತತ್ತ್ವವು ಗೋಚರಿಸುವುದು. ಪ್ರಪಂಚವು ಬ್ರಹ್ಮನಲ್ಲಿ ಆರೋಪಿತವಲ್ಲ. ಬ್ರಹ್ಮನು ಅದಕ್ಕೆ ಉಪಾದಾನಕಾರಣನಲ್ಲ. ಅದು ಬ್ರಹ್ಮನಂತೆ ಸತ್ಯ; ಆದರೂ ಅವನ ಅಧೀನ. ಜೀವರು ಅನಾದಿನಿತ್ಯರು; ತರತಮಭಾವವುಳ್ಳವರು. ಅವರು ಚೇತನಾಚೇತನಾತ್ಮಕವಾದ ಪ್ರಪಂಚವು ಈಶ್ವರ ಪರತಂತ್ರವೆಂದು ತಿಳಿದು, ಸಾಧನಸಂಪತ್ತುಳ್ಳವರಾಗಿ, ಬ್ರಹ್ಮಾಪರೋಕ್ಷವನ್ನು ಪಡೆದು, ಬ್ರಹ್ಮಪ್ರಸಾದದಿಂದ ಸ್ವಸ್ವರೂಪಭೂತವಾದ ಆನಂದಾನುಭವವೆಂಬ ಮುಕ್ತಿಯನ್ನು ಹೊಂದುವರು." (ಪುಟ ೫೫೧)

### ಸಾಧನ ಸಂಪತ್ತಿ

" ಶಮ, ದಮ ಮೊದಲಾದ ಶುಭಗುಣಗಳುಳ್ಳ ಜೀವನು ಭಗವಂತನ ಪ್ರೀತಿಗೋಸ್ಕರವಾಗಿಯೆ ವರ್ಣಾಶ್ರಮಗಳಿಗನುಗುಣವಾದ ನಿತ್ಯ ನೈಮಿತ್ತಿಕ

ಕರ್ಮವನ್ನಾಚರಿಸುವುದರ ಮೂಲಕ ಅಧಿಕಾರ ಸಂಪತ್ತುಳ್ಳವನಾಗಿ ಗುರುಮುಖದಿಂದ ಶಾಸ್ತ್ರಶ್ರವಣವಾಡಿ, ವಿಷ್ಣುವೇ ಸರ್ವೋತ್ತಮನೆಂದೂ ಭಗವತ್ಪ್ರಸಾದವೇ ಮುಕ್ತಿಗೆ ಕಾರಣವೆಂದೂ ತಿಳಿದು, ಸರ್ವೋತ್ತಮನಾದ ಭಗವತ್ತತ್ತ್ವವನ್ನು ಸುದೃಢವಾದ ಆದರವೆಂಬ ಭಕ್ತಿಯಿಂದ ಸಹಿತವಾಗಿ ವಿಚಾರ ಮಾಡುವುದರ ಮೂಲಕ ಈ ತತ್ತ್ವವನ್ನು ಧ್ಯಾನಿಸಲು ಅವನಿಗೆ ಪರಬ್ರಹ್ಮನ ಪ್ರಸಾದ ಉಂಟಾಗಿ, ಅವನಿಗೆ ಭಗವಂತನ ಅಪರೋಕ್ಷವು ಲಭಿಸುವುದು. ಇದರಿಂದ ಸಂಚಿತವಾದ ಕರ್ಮಗಳೂ ಮುಂದೆ ಅವನು ಮುಕ್ತಿಹೊಂದುವವರೆಗೂ ಮಾಡಬಹುದಾದ ಕರ್ಮಗಳೂ ನಾಶವನ್ನು ಹೊಂದುವುವು. ಆದರೆ, ಅವನು ತತ್ಕಾಲದಲ್ಲಿ ಫಲಕೊಡಲು ಸನ್ನದ್ಧವಾದ ಕರ್ಮವನ್ನು ಮಾತ್ರ ಭೋಗದಿಂದಲೇ ನೀಗಬೇಕಾಗಿರುವುದು. ಈ ಕರ್ಮಕ್ಕೆ ಪ್ರಾರಬ್ಧಕರ್ಮವೆಂದು ಹೆಸರು. ಇದು ತೀರುವವರೆಗೂ ಅವನು ಸಂಸಾರದಲ್ಲಿದ್ದರೂ ಮುಕ್ತನಂತೆಯೆ ಇರುವನು. ಈ ಅವಸ್ಥೆಯಲ್ಲಿ ಅವನನ್ನು ಜೀವನ್ಮುಕ್ತನೆಂದು ಕರೆಯಬಹುದು. ಈ ಕರ್ಮವು ತೀರಿದ ಅನಂತರ ಅವನು ಈ ಸಂಸಾರ ಬಂಧನವನ್ನು ತೊರೆದು, ಭಗವಂತನ ಸನ್ನಿಧಿಯಲ್ಲಿ ತನ್ನ ಸ್ವರೂಪಭೂತವಾದ ಆನಂದವನ್ನು ಸಂಪೂರ್ಣವಾಗಿ ಅನುಭವಿಸುವನು. ಈ ಆನಂದಾನುಭವವೇ ಮುಕ್ತಿ. ಇದು ನಿತ್ಯ." ಪುಟ **೬೬೭–೬೬೮**)

ದ್ವೈತಸಿದ್ಧಾಂತವು ಪಂಚಭೇದಾಧಿರೂಢವಾಗಿದೆ. ಹೇಗೆಂದರೆ, (೧) ಜೀವ, ಈಶ ಭೇದ (೨) ಜೀವ, ಜಡ ಭೇದ (೩) ಜೀವ, ಜೀವ ಭೇದ (೪) ಜಡ, ಈಶ ಭೇದ (೫) ಜಡ, ಜಡ ಭೇದ ಈ ಪ್ರಕಾರ ಪಾರಮಾರ್ಥಿಕವಾಗಿ ಭೇದವಿದೆ. ಅರ್ಥಾತ್ ಈ ಐದುಭೇದಗಳು ಅನಾದಿ ನಿತ್ಯವಾಗಿರುತ್ತವೆ.

ವಿಷ್ಣುಭಕ್ತಿಯಲ್ಲಿ–ಅನಂತಕಲ್ಯಾಣಗುಣಗಣಪರಿಪೂರ್ಣನಾದ ಶ್ರೀಮನ್ನಾರಾಯಣನ ಆರಾಧನೆಯೇ ಪ್ರಧಾನಾಂಗವಾಗಿದೆ. **ಅಂಕನವು** ಎಂದರೆ, ಕೇಶವಾದಿ ದ್ವಾದಶಭಗವನ್ನಾಮ ಸಂಜ್ಞಕ ಗೋಪೀಚಂದನದ ದ್ವಾದಶನಾಮಗಳನ್ನು ಲಲಾಟ, ಕಂಠ, ಭುಜೋದರಾದಿ ಅವಯವಗಳ ಮೇಲೆ ಹಚ್ಚುವುದು, ಮತ್ತು ಅವುಗಳ ಮೇಲೆ ಶಂಖಚಕ್ರಾದಿ ಭಗವದಾಯುಧಗಳನ್ನು ಮುದ್ರಿತಮಾಡುವುದು ವಿಷ್ಣುಭಕ್ತಿಯ ಉಪಾಂಗವಾಗಿದೆ.

# ೫ನೆಯ ಪರಿಶಿಷ್ಟ

## ಶ್ರೀಮಾಧ್ವಮತಗಳ ಗುರುಪರಂಪರಾ ಪೀಳಿಗೆಗಳು.

———0———

### ಉತ್ತರಾದಿ ಮಠದ ಗುರುಪರಂಪರಾ ಪೀಳಿಗೆಯು

೧ನೆಯ ಪರಿಶಿಷ್ಟದಲ್ಲಿ ಶ್ರೀಮನ್ಮಧ್ವಾಚಾರ್ಯರ ಕಾಲನಿರ್ಣಯವನ್ನು ಮಾಡಿ, ಅಲ್ಲಿಯೇ ಉತ್ತರಾದಿಮಠದ ಗುರುಪರಂಪರಾ ಪೀಳಿಗೆಯನ್ನು ಸಂಪೂರ್ಣವಾಗಿ ಹೇಳಿದ್ದೇನೆ. ಆ ೧ನೆಯ ಪರಿಶಿಷ್ಟದಲ್ಲಿ ಕಾಲನಿರ್ಣಯವೇ ಮುಖ್ಯ ವಿಷಯವಾದುದರಿಂದ ಉತ್ತರಾದಿ ಮಠದ ಅಧ್ಯಕ್ಷರಾದ ಮತ್ತು ವೃಂದಾವನಸ್ಥರಾದ ಸಕಲ ಗುರುಗಳ ನಿರ್ಯಾಣಕಾಲಗಳನ್ನು ಮಾತ್ರ ಹೇಳಿದ್ದೇನೆಯೇ ಹೊರತು ಅವರೆಲ್ಲರ ವೃಂದಾವನದ ಸ್ಥಳಗಳನ್ನು ಅಲ್ಲಿ ಉಲ್ಲೇಖಮಾಡಿರುವುದಿಲ್ಲ. ಆದುದರಿಂದ ಈ ಪರಿಶಿಷ್ಟದಲ್ಲಿ ಉತ್ತರಾದಿ ಮಠದ ಅಧ್ಯಕ್ಷರಾದ ಮತ್ತು ನಿರ್ಯಾಣಹೊಂದಿದ ಎಲ್ಲ ಗುರುಗಳ ವೃಂದಾವನದ ಸ್ಥಳಗಳನ್ನು ಗುರುಗಳ ಸ್ಥಾನಾನುಕ್ರಮದಿಂದ ಹೇಳಲುಪಕ್ರಮಿಸುತ್ತೇನೆ.

### (ವೃಂದಾವನದ ಸ್ಥಳಗಳು)

(೧) ಬದರಿಕಾಶ್ರಮ (೨) ಆನೇಗುಂದಿ (೩) ಮಣ್ಣೂರು (೪) ಮಳಖೇಡ (೫) ಚಕ್ರತೀರ್ಥ (ಹಂಪಿ) (೬) ಮಳಖೇಡ (೭) ಯರಗೋಳ (೮) ಆನೇಗುಂದಿ (೯) ಆನೇಗುಂದಿ (೧೦) ಯರಗೋಳ (೧೧) ಯರಗೋಳ (೧೨) ಮಳಖೇಡ (೧೩) ಆನೇಗುಂದಿ (೧೪) ತಿರ ಕಲ್ಲೂರು (೧೫) ಪೆನಗುಂಡಿ (೧೬) ಏಕಚಕ್ರನಗರ (೧೭) ಪಂಢರಪುರ (೧೮) ಸಾಂಗಲಿ (೧೯) ನಿವೃತೀ ಸಂಗಮ (೨೦) ಪಿರ ಚೋಳಾಪೂರ (೨೧) ನಾಚಾರಗುಡಿ [೨೨] ಕಲ್ಯಾರು [೨೩] ಆರಣೀ [೨೪] ಮಾನಾಮಧುರೀ [೨೫] ಸವಣೂರು [೨೬] ಮಹಿಷಿ [೨೭] ಸಂತೀಬಿದನೂರು [೨೮] ಹೊಳೆಹೊನ್ನೂರು [೨೯] ಮೈಸೂರು [೩೦] ಮೈಸೂರು [೩೧] ಗುರ್ಲಹೊಸೂರು [೩೨] ಆತಕೂರು [೩೩] ಆತಕೂರು [೩೪] ಚಿತಾಪೂರ [೩೫] ಕೊರ್ಲಹಳ್ಳಿ [೩೬] ಆತಕೂರು [೩೭] ರಾಜಮಹೇಂದ್ರಿ

# ಶ್ರೀವಿಬುಧೇಂದ್ರರ ಮಠದ ಗುರುಪರಂಪರಾ ಪೀಳಿಗೆಯು

| ಜಗದ್ಗುರುಗಳು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣ ಕಾಲದ ಶಕ ವರ್ಷಗಳು | ನಿರ್ಯಾಣಕಾಲದ ಮಾಸ, ಪಕ್ಷ, ತಿಥಿಗಳು |
|---|---|---|---|
| ೧ ಶ್ರೀ ವಿಬುಧೇಂದ್ರ ತೀರ್ಥರು | ಪರಾಭವ | ೧೩೪೮ | ಮಾರ್ಗಶೀರ್ಷ ಶುಕ್ಲ ೧೦ |
| ೨ ಶ್ರೀ ಜಿತಾಮಿತ್ರ ತೀರ್ಥರು | ಕಾಳಯುಕ್ತಿ | ೧೪೨೦ | ಮಾರ್ಗಶೀರ್ಷ ಕೃಷ್ಣ ೩೦ |
| ೩ ಶ್ರೀ ರಘುನಂದನ ತೀರ್ಥರು | ವಿಜಯ | ೧೪೫೫ | ಕಾರ್ತಿಕ ಕೃಷ್ಣ ೮ |
| ೪ ಶ್ರೀ ಸುರೇಂದ್ರ ತೀರ್ಥರು | ವಿಕಾರಿ | ೧೪೬೧ | ಪುಷ್ಯ ಶುಕ್ಲ ೧೨ |
| ೫ ಶ್ರೀ ವಿಜಯೀಂದ್ರ ತೀರ್ಥರು | ಮನ್ಮಥ | ೧೫೧೭ | ಜ್ಯೇಷ್ಠ ಕೃಷ್ಣ ೧೩ |
| ೬ ಶ್ರೀ ಸುಧೀಂದ್ರ ತೀರ್ಥರು | ರುಧಿರೋದ್ಗಾರಿ | ೧೫೪೫ | ಫಾಲ್ಗುಣ ಕೃಷ್ಣ ೩ |
| ೭ ಶ್ರೀ ರಾಘವೇಂದ್ರ ಸ್ವಾಮಿಗಳು | ವಿರೋಧಿಕೃತ್ | ೧೫೯೩ | ಶ್ರಾವಣ ಕೃಷ್ಣ ೨ |
| ೮ ಶ್ರೀ ಯೋಗೀಂದ್ರ ತೀರ್ಥರು | ವಿಭವ | ೧೬೧೦ | ಮಾಘ ಶುಕ್ಲ ೧೦ |
| ೯ ಶ್ರೀ ಸೂರೀಂದ್ರ ತೀರ್ಥರು | ಆಂಗಿರಾ | ೧೬೧೪ | ಜ್ಯೇಷ್ಠ ಶುಕ್ಲ ೨ |
| ೧೦ ಶ್ರೀ ಸುಮತೀಂದ್ರ ತೀರ್ಥರು | ವಿಶ್ವಾವಸು | ೧೬೪೭ | ಆಷಾಢ ಕೃಷ್ಣ ೧೧ |
| ೧೧ ಶ್ರೀ ಉಪೇಂದ್ರ ತೀರ್ಥರು | ಕೀಲಕ | ೧೬೫೦ | ಮಾರ್ಗಶೀರ್ಷ ಕೃಷ್ಣ ೮ |
| ೧೨ ಶ್ರೀ ವಾದೀಂದ್ರ ತೀರ್ಥರು | ಪ್ರಮೋದ | ೧೬೭೨ | ಜ್ಯೇಷ್ಠ ಶುಕ್ಲ ೯ |
| ೧೩ ಶ್ರೀ ವಸುಧೇಂದ್ರ ತೀರ್ಥರು | ವಿಷು | ೧೬೮೩ | ಆಶ್ವಿನ ಕೃಷ್ಣ ೭ |
| ೧೪ ಶ್ರೀ ವರದೇಂದ್ರ ತೀರ್ಥರು | ವಿಶ್ವಾವಸು | ೧೭೦೭ | ಆಷಾಢ ಶುಕ್ಲ ೬ |
| ೧೫ ಶ್ರೀ ಭುವನೇಂದ್ರ ತೀರ್ಥರು | ಸಿದ್ಧಾರ್ಥಿ | ೧೭೨೧ | ವೈಶಾಖ ಕೃಷ್ಣ ೬ |
| ೧೬ ಶ್ರೀ ಸುಬೋಧೇಂದ್ರ ತೀರ್ಥರು | ಮನ್ಮಥ | ೧೭೫೭ | ಚೈತ್ರ ಕೃಷ್ಣ ೩ |
| ೧೭ ಶ್ರೀ ಸುಜನೇಂದ್ರ ತೀರ್ಥರು | ದುರ್ಮುಖಿ | ೧೭೫೮ | ಕಾರ್ತಿಕ ಕೃಷ್ಣ ೮ |
| ೧೮ ಶ್ರೀ ಸುಜ್ಞಾನೇಂದ್ರ ತೀರ್ಥರು | ದುರ್ಮತಿ | ೧೭೮೩ | ಶ್ರಾವಣ ಕೃಷ್ಣ ೪ |
| ೧೯ ಶ್ರೀ ಸುಧರ್ಮೇಂದ್ರ ತೀರ್ಥರು | ಅಂಗಿರಾ | ೧೭೯೪ | ಪುಷ್ಯ ಕೃಷ್ಣ ೫ |
| ೨೦ ಶ್ರೀ ಸುಗುಣೇಂದ್ರ ತೀರ್ಥರು | ತಾರಣ | ೧೮೦೬ | ಮಾರ್ಗಶೀರ್ಷ ಶುಕ್ಲ ೧೫ |
| ೨೧ ಶ್ರೀ ಸುಪ್ರಜ್ಞೇಂದ್ರ ತೀರ್ಥರು | ಶೋಭಕೃತ್ | ೧೮೨೫ | ಮಾಘ ಕೃಷ್ಣ ೪ |
| ೨೨ ಶ್ರೀ ಸುಕೃತೀಂದ್ರ ತೀರ್ಥರು | ಪರಿಧಾವಿ | ೧೮೩೪ | ಆಶ್ವಿನ ಶುಕ್ಲ ೧೦ |
| ೨೩ ಶ್ರೀ ಸುಶೀಲೇಂದ್ರ ತೀರ್ಥರು | ಕ್ಷಯ | ೧೮೪೮ | ಆಷಾಢ ಶುಕ್ಲ ೩ |
| ೨೪ ಶ್ರೀ ಸುವ್ರತೇಂದ್ರ ತೀರ್ಥರು | ಶ್ರೀಮುಖ | ೧೮೫೫ | ವೈಶಾಖ ಶುಕ್ಲ ೧೧ |
| ೨೫ ಶ್ರೀ ಯಮೀಂದ್ರ ತೀರ್ಥರು | ಈ ಶ್ರೀಪಾದಂಗಳವರು ೧೮೫೫ನೆಯ ಶಕವರ್ಷದ ಶ್ರೀಮುಖ ನಾಮ ಸಂವತ್ಸರದ ವೈಶಾಖ ಶುಕ್ಲ ಪಂಚಮಿಯ ದಿವಸ ಪೀಠವನ್ನು ಆರೋಹಣ ಮಾಡಿ ದ್ವೈತಮತ ಸಾಮ್ರಾಜ್ಯವನ್ನು ಆಳುತ್ತಿದ್ದಾರೆ. | | |

## (ವೃಂದಾವನದ ಸ್ಥಳಗಳು)

ಈ ವಿಬುಧೇಂದ್ರರ ಮಠದ ನಿರ್ಯಾಣ ಹೊಂದಿದ ಎಲ್ಲ ಗುರುಗಳ ವೃಂದಾವನದ ಸ್ಥಳಗಳನ್ನು ಗುರುಗಳ ಸ್ಥಾನಾನುಕ್ರಮದಿಂದ ಹೇಳಲುಪಕ್ರಮಿಸುತ್ತೇವೆ.

[೧] ತಿನ್ನವಲ್ಲಿ [೨] ಕೂಡ್ಲೂರು [೩] ಚಕ್ರತೀರ್ಥ [ಹಂಪೆ] [೪] ಮಧುರೆ [೫] ಕುಂಭಕೋಣ [೬] ನವವೃಂದಾವನ [ಆನೇಗುಂದಿ] [೭] ಮಂತ್ರಾಲಯ [೮] ಶ್ರೀರಂಗ [೯] ಮಾನಮಧುರ [೧೦] ಶ್ರೀರಂಗ [೧೧] ಶ್ರೀರಂಗ [೧೨] ಮಂತ್ರಾಲಯ [೧೩] ಕೆಂಚನ ಗುಡ್ಡ [೧೪] ಪುಣೆ [೧೫] ರಾಜೋಳಿ [೧೬] ನಂಜನಗೂಡು [೧೭] ನಂಜನಗೂಡು [೧೮] ನಂಜನಗೂಡು [೧೯] ಮಂತ್ರಾಲಯ [೨೦] ಚಿತ್ತೂರು [೨೧] ನಂಜನಗೂಡು [೨೨] ನಂಜನಗೂಡು [೨೩] ರಿತ್ತಿ [೨೪] ಮಂತ್ರಾಲಯ

## ಶ್ರೀ ಕಣ್ವಮಠದ ಗುರುಪರಂಪರಾ ಪೀಳಿಗೆಯು

| ಜಗದ್ಗುರುಗಳು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣ ಕಾಲದ ಶಕ ವರ್ಷಗಳು | ನಿರ್ಯಾಣಕಾಲದ ಮಾಸ, ಪಕ್ಷ, ತಿಥಿಗಳು |
|---|---|---|---|
| ೧ ಶ್ರೀ ಮಾಧವ ತೀರ್ಥರು | ಶುಕ್ಲ | ೧೭೩೧ | ಚೈತ್ರ ಶುಕ್ಲ ೪ |
| ೨ ಶ್ರೀ ಅಕ್ಷೋಭ್ಯ ತೀರ್ಥರು | ಪ್ರಜೋತ್ಪತ್ತಿ | ೧೭೩೩ | ಭಾದ್ರಪದ ಕೃಷ್ಣ ೧೪ |
| ೩ ಶ್ರೀ ವಿದ್ಯಾಧೀಶ ತೀರ್ಥರು | ಕೀಲಕ | ೧೭೭೦ | ಆಷಾಢ ಕೃಷ್ಣ ೨ |
| ೪ ಶ್ರೀ ವಿದ್ಯಾನಿಧಿ ತೀರ್ಥರು | ಅಕ್ಷಯ | ೧೭೮೮ | ಫಾಲ್ಗುಣ ಕೃಷ್ಣ ೬ |
| ೫ ಶ್ರೀ ವಿದ್ಯಾಸಂಪೂರ್ಣ ತೀರ್ಥರು | ಸರ್ವಧಾರಿ | ೧೮೧೦ | ಭಾದ್ರಪದ ಶುಕ್ಲ ೧೧ |
| ೬ ಶ್ರೀ ವಿದ್ಯಾಧಿರಾಜ ತೀರ್ಥರು | ಸಿದ್ಧಾರ್ಥಿ | ೧೮೪೧ | ಆಶ್ವಿನ ಕೃಷ್ಣ ೩೦ |
| ೭ ಶ್ರೀ ವಿದ್ಯಾನಿರಾಜ ತೀರ್ಥರು | ಈ ಶ್ರೀಪಾದಂಗಳವರು ೧೮೪೧ನೆಯ ಶಕವರ್ಷದ ಸಿದ್ಧಾರ್ಥಿ ಸಂವತ್ಸರದ ಆಶ್ವಿನ ಕೃಷ್ಣ ಅಷ್ಟಮಿಯ ದಿವಸ ಪೀಠವನ್ನು ಆರೋಹಣ ಮಾಡಿ, ದ್ವೈತಮತ ಸಾಮ್ರಾಜ್ಯವನ್ನು ಆಳುತ್ತಿದ್ದಾರೆ. | | |

ಶ್ರೀಮದ್ವಿದ್ಯಾಧಿರಾಜತೀರ್ಥ ಶ್ರೀಪಾದಂಗಳವರು ಕಳೆದ ೧೮೫೭ನೆಯ ಶಕವರ್ಷದ ಯುವಸಂವತ್ಸರದ ಮಾರ್ಗಶಿರ ಶುಕ್ಲ ೨ ಗುರುವಾರ ದಿವಸ

ವೇ. ಶಾ. ಸಂ. ಕೊಡೇಕಲ್ಲ ಗೋವಿಂದಾಚಾರ್ಯರಿಗೆ ಸನ್ಯಾಸಾಶ್ರಮವನ್ನೂ **'ವಿದ್ಯಾವಿಜಯತೀರ್ಥ''** ಎಂಬ ಆಶ್ರಮ-ನಾಮವನ್ನೂ ಕೊಟ್ಟು, ಇವರನ್ನು ಶ್ರೀ ಕಣ್ವಮಠದ ಪೀಠಾಧೀಶರನ್ನಾಗಿ ನಿಯೋಜಿಸಿದರು. ಅರ್ಥಾತ್ ಶ್ರೀಮದ್ವಿದ್ಯಾವಿರಾಜತೀರ್ಥ ಶ್ರೀಪಾದಂಗಳವರು, ಕರಕಮಲ ಸಂಜಾತ ಯತಿಶಿಷ್ಯರಾದ ಶ್ರೀಮದ್ವಿದ್ಯಾವಿಜಯತೀರ್ಥ ಶ್ರೀಪಾದಂಗಳವರಲ್ಲಿ ದೇವತಾರ್ಚನೆಯನ್ನು ಸಮರ್ಪಿಸಿದರು.

## (ವೃಂದಾವನದ ಸ್ಥಳಗಳು)

ಈ ಕಣ್ವಮಠದ ನಿರ್ಯಾಣ ಹೊಂದಿದ ಎಲ್ಲ ಗುರುಗಳ ವೃಂದಾವನದ ಸ್ಥಳಗಳನ್ನು ಗುರುಗಳ ಸ್ಥಾನಾನುಕ್ರಮದಿಂದ ಹೇಳಲುಪಕ್ರಮಿಸುತ್ತೇವೆ.

[೧] ಬುದ್ನಿನ್ನಿ [೨] ಬಿಳಿಭಾವಿ [೩] ಹುಣಸೆಹೊಳೆ [೪] ಬಿಳಿಭಾವಿ [೫] ಗುರುಲೋಟಿ [೬] ಹುಣಸಿಹೊಳೆ

## ೧ ಶ್ರೀ ರಾಜೇಂದ್ರರ ಮಠದ ಗುರುಪರಂಪರಾ ಪೀಳಿಗೆಯು

| ಜಗದ್ಗುರುಗಳು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣ ಕಾಲದ ಶಕ ವರ್ಷಗಳು | ನಿರ್ಯಾಣಕಾಲದ ಮಾಸ, ಪಕ್ಷ, ತಿಥಿಗಳು |
|---|---|---|---|
| ೧ ಶ್ರೀ ರಾಜೇಂದ್ರ ತೀರ್ಥರು | ಸಾಧಾರಣ | ೧೨೯೨ | ಕಾರ್ತಿಕ ಕೃಷ್ಣ ೫ |
| ೨ ಶ್ರೀ ಜಯಧ್ವಜ ತೀರ್ಥರು | ರಾಕ್ಷಸ | ೧೩೫೭ | ಕಾರ್ತಿಕ ಶುಕ್ಲ ೧೫ |
| ೩ ಶ್ರೀ ಪುರುಷೋತ್ತಮ ತೀರ್ಥರು | ದುಂದುಭಿ | ೧೩೬೪ | ಮಾಘ ಶುಕ್ಲ ೫ |
| ೪ ಶ್ರೀ ಬ್ರಹ್ಮಣ್ಯ ತೀರ್ಥರು | ಸರ್ವಜಿತ | ೧೩೮೯ | ವೈಶಾಖ ಕೃಷ್ಣ ೧೨ |
| ೫ ಶ್ರೀ ವ್ಯಾಸ ತೀರ್ಥರು | ವಿಳಂಬಿ | ೧೪೬೦ | ಫಾಲ್ಗುಣ ಕೃಷ್ಣ ೪ |
| ೬ ಶ್ರೀ ಶ್ರೀನಿವಾಸ ತೀರ್ಥರು | ಪ್ರಮೋದ | ೧೪೯೨ | ಚೈತ್ರ ಶುಕ್ಲ ೬ |
| ೭ ಶ್ರೀ ರಾಮತೀರ್ಥರು | ವಿಕ್ರಮ | ೧೫೦೨ | ಆಷಾಢಶುಕ್ಲ ೯ |

೧ ಶ್ರೀರಾಜೇಂದ್ರರಮಠದ ೫ನೆಯ ಶ್ರೀಪಾದಂಗಳವರಾದ ಶ್ರೀವ್ಯಾಸತೀರ್ಥರು ಘನಪಂಡಿತರೆಂದು ವಿಖ್ಯಾತರಾದುದರಿಂದಲೂ, ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದ ಕೃಷ್ಣದೇವರಾಜನು ಇವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಮುತ್ತು ರತ್ನಗಳಿಂದ ಇವರಿಗೆ ಅಭಿಷೇಕ ಮಾಡಿದ್ದರಿಂದ ಇವರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿದ್ದರಿಂದಲೂ ಈ ರಾಜೇಂದ್ರರ ಮಠಕ್ಕೆ ವ್ಯಾಸರಾಯರ ಮಠ ಎಂದೂ ಜನರು ಸಂಬೋಧಿಸಲಾರಂಭಿಸಿದರು.

ಈ ೭ನೆಯ ಶ್ರೀಪಾದಂಗಳವರಾದ ಶ್ರೀ ರಾಮತೀರ್ಥರ ತರುವಾಯ ಶ್ರೀ ಶ್ರೀಧರ ತೀರ್ಥರ ಶಿಷ್ಯ ಪರಂಪರೆಯು ಹಾಗೂ ಶ್ರೀ ಲಕ್ಷ್ಮೀಕಾಂತ ತೀರ್ಥರ ಶಿಷ್ಯಪರಂಪರೆಯು ಎಂಬೆರಡು ಮತಭೇದಗಳುಂಟಾಗಿವೆ. ಕೆಲವರು ಶ್ರೀ ಲಕ್ಷ್ಮೀಕಾಂತ ತೀರ್ಥರ ಶಿಷ್ಯಪರಂಪರೆಯೇ ಶ್ರೀರಾಜೇಂದ್ರರ ಮಠದ ಗುರುಪರಂಪರೆಯೆಂದೂ, ಬೇರೆ ಕೆಲವರು ಶ್ರೀಶ್ರೀಧರ ತೀರ್ಥರ ಶಿಷ್ಯ ಪರಂಪರೆಯು ಶ್ರೀ ರಾಜೇಂದ್ರರ ಮಠದ ಗುರುಪರಂಪರೆಗೆ ಸೇರುತ್ತದೆಂದು ಹೇಳಿದ್ದಾರೆ. ಈ ಪ್ರಕಾರ ಇದು ವಾದಗ್ರಸ್ತವಿಷಯವಾದುದರಿಂದಲೂ, ಈ ರಾಜೇಂದ್ರರ ಮಠದ ಸಮಸ್ತ ಶ್ರೀಪಾದಂಗಳವರ ವೃಂದಾವನದ ಸ್ಥಳಗಳನ್ನು ಬರೆದಿಟ್ಟಿಲ್ಲವಾದುದರಿಂದಲೂ ಹಾಗೂ ಶ್ರೀಲಕ್ಷ್ಮೀಕಾಂತತೀರ್ಥರ ಮತ್ತು ಅವರ ಶಿಷ್ಯಪ್ರಶಿಷ್ಯರೆಲ್ಲರ ನಿರ್ಯಾಣಕಾಲದ ಶಕ ವರ್ಷ, ಸಂವತ್ಸರಗಳನ್ನು ಹೇಳದೆ ಇದ್ದುದರಿಂದಲೂ ಶ್ರೀ ರಾಜೇಂದ್ರರ ಮಠದ ಗುರುಪರಂಪರಾಪೀಳಿಗೆಯನ್ನು ಸಂಪೂರ್ಣವಾಗಿ ಇಲ್ಲಿ ಹೇಳಿರುವುದಿಲ್ಲ.

ಇದೇ ಮೇರೆಗೆ ಭೀಮನಕಟ್ಟೆಮಠ, ಭಂಡಾರಕೇರಿಮಠ, ಕೂಡಲಗಿಮಠ, ಮಜ್ಜಿಗೆಹಳ್ಳಿಮಠ, ಶ್ರೀಪಾದರಾಯರಮಠ, ಸುಬ್ರಹ್ಮಣ್ಯಮಠ, ಕಾಣೂರಮಠ, ಪೇಜಾವರಮಠ, ಪಲಮಾರುಮಠ, ಅದಮಾರುಮಠ, ಕೃಷ್ಣಾಪುರ ಮಠ, ಪುತ್ತಿಗೆಮಠ, ಶಿರೂರಮಠ, ಸೋದೆಮಠ ಇವೆಲ್ಲ ಮಠಗಳ ವೃಂದಾವನಸ್ಥರಾದ ಶ್ರೀಪಾದಂಗಳವರ ನಿರ್ಯಾಣಕಾಲದ ಶಕ ವರ್ಷ, ಸಂವತ್ಸರ, ಮಾಸ, ಪಕ್ಷ, ತಿಥಿಗಳನ್ನೂ ಹಾಗೂ ಅವರ ವೃಂದಾವನದ ಸ್ಥಳಗಳನ್ನೂ ಯಾರೂ ಬರೆದಿಟ್ಟಿಲ್ಲ. ಆದ್ದರಿಂದ ಈ ಎಲ್ಲ ಮಠಗಳ ಗುರುಪರಂಪರಾ ಪೀಳಿಗೆಗಳನ್ನು ಇಲ್ಲಿ ಹೇಳಿರುವುದಿಲ್ಲ.